Kannada Research Lectures Series No. 5

# Lectures on Kannada Grammar

*by*

Śrī M. P. Pujar
Pandit, Training College for Men, Dharwar (retired)

# ಕೆಲವು ಕನ್ನಡ ವ್ಯಾಕರಣ ವಿಚಾರಗಳು

(ದರ್ಪಣ—ಶಾಸನಗಳನ್ನಧಿಕರಿಸಿ)

ಉಪನ್ಯಾಸಕರು
**ಪಂಡಿತ ಮ. ಪ್ರ. ಪೂಜಾರ**
ಧಾರವಾಡ ಗಂಡುಮಕ್ಕಳ ಟ್ರೇನಿಂಗ ಕಾಲೇಜದ ನಿವೃತ್ತ ಕನ್ನಡ ಪಂಡಿತರು

**Kannada Research Institute,**
**Dharwar**
**1952**

ಬೆಲೆ ರೂ. ೧-೮-೦ ]

# FOREWORD

The brochure published below embodies the texts of two research lectures on Kannada Grammar delivered by Pandit Śrī **Mahadeva Sastri Prabhakara Sastri Pujar** retired Pandit of the Training College for Men, Dharwar, under the auspices of the Kannada Research Institute. The author is an erudite scholar in Kannada Language and Literature and being one of the brilliant products of traditional learning both in Sanskrit and Kannada preserves the correct scientific ( Sastraic ) interpretation of the Sūtras of Kēśirāja and Bhaṭṭakalaṅka Śrī Pujar applies his critical acumen to the Sūtras of the **Śabdamaṇidarpaṇa** and **Śabdānuśāsana** to extract the true import of the grammatical structure of Kannada on the basis of the old usage. Among the several topics discussed in the lectures, the following call for special attention :—

(1) **Kannada phonetics and phonology**. The author discusses the function and history of the two special alphabets Ṟ ( ಱ ) and Ḷ ( ೞ ) and notices that by the time of Kēśirāja (1300 A. D.), they had lost their special character and had become confounded with the ordinary r (ರ) and ḷ (ಳ) to such an extent that Kēśirāja who was a great advocate of puritanism in Kannada and strove hard to maintain purisms, himself unconsciously allowed the recurrence of these two letters ಱ–ರ and ೞ–ಳ in **yamaka** and **anuprāsa**.

(2) The lecturer has rightly emphasised on the need of a Manual on the phonetics of Kannada sounds in which the imported sounds such as f, z etc. should find a place

(3) The grammatical explanation of the common-place word **'allade'** found in the Śabdamaṇidarpaṇa, S. 64, has been a subject of long discussion in which the author's learning and grasp of the topic are exhibited. The critical symposium on the ban against hard euphony, embodied in the two Sūtras of **Śabdamaṇidarpaṇa.**, 59 and 60 is indeed an original contribution to the subject. The euphony of harsh sounds in conjunct letters with **rēpha**, was permissible both in Sanskrit and Kannada, but slowly this was extended to other cases also as in **bandu dvārakege** etc

The author refers to the loose use of the word **liṅga** by Kēśirāja, which stands both for the nominal stem (**Prātipadika**) and the gender. Such promiscuous use of technical terms and expressions in the **Śabdamaṇidarpaṇa** detracts the value of the work as a scientific treatise on grammar. This deficiency in Kēśirāja has been pointed out by the lecturer in the course of his discussion (Vide p. 14, 15, 21, 35, 36, 38 etc.).

The most important part in the lectures is the explanation of the term **Gamaka Samāsa** current in Kannada Grammar which is apparently borrowed from the expression found in Sanskrit literature Sāpēkshtvē'pi Gamakatvāt – Samāsaḥ. Though according to the Sūtra Samarthaḥ Pada-vidhiḥ, compounds are allowed only of words which are **nirākāmksha** or **nirapēksha** and not Sākāmksha. In the examples like **Dēvadattasya Gurukulam**, the compound **Guru-Kulam** is not sanctioned by the above Sūtras as **guru** is **sāpēksha** with **Dēvadatta.** But this is allowed on the ground that such usages are found in the works of eminent poets like Kālidāsa.

Ākāra-sadṛiśa-prajnah prajnayā sadṛiśāgamah

— Raghu, I,

This was not called **Gamaka-Samāsa** in Sanskrit whereas in Kannada, which borrowed the same idealogy in justifying the compounds of the above type, is coined a special name **Gamaka-samāsa.**

The incongruity in the interpretation of the opening verse Śrī **Ramanaṭi** etc., in the **Jagannathavijaya** of Rudrabhaṭṭa by Bhaṭṭākaḷa ka, author of the **Śabdānuśāsana** has led the lecturer to refute him and to offer a correct meaning of the verse on a strict grammatical plane. While disscussing the compounds in Kannaḍa, the author has correctly pointed out the redundancy of the **Bahuvrīhi** as a separate compound in Kannada as its function is fully performed by the addition of the **taddhita** terminations to the Karmadhāraya compounds. What are usually explained as **bahuvrīhi** are really the **tadhitanta** Karmadhāraya compounds in Kannaḍa.

The lecturer suggests the addition of one more compound to the list of compounds in Kannaḍa Viz. **Comparison-compounds** with **ante,** vōl. etc., as with **iva** in Sanskrit cf eg. **Vag-arthav-iva sampṛiktau** ( Raghu, I, i ). The expression **Raman-ante** is a compound word and does not admit of a change in the order of the words **Rama** and **ante,** into **ante** and Rāma

The last portion of the lecture is devoted to the consideration of the **Active** and **Passive** voices in Kannaḍa. After answering the latest objections against the admission of the Passive voice, the learned lecturer concludes that the Kannada language has adopted the Passive voice of Sanskrit

along with the order of words in sentences, as in **Rāmaninda Rāvaṇanu kollalpaṭṭanu** which is a literal Kannada rendering of the Sanskrit sentence **Rāmēṇa Rāvaṇah hatah.** Further, it is pointed out that there are traces of the use of Passive voice in the Śabdamaṇidarpaṇa, eg., *pēḷal-paḍegum etc.*

It may not be out of place to call attention to the excellent gloss on the fourth chapter of the **Śabdānuśāsana** prepared by the author at the request of the **Karnatak Vidyāvardhaka Sangha,** Dharwar, in place of the ṭīkā of the late Śrī Kuṇḍalagiri Āchārya which had been lost and untraceable.

Pandit Śrī M. P. Pujar has given here, a scientific treatment of some of the important Sūtras of Kēśirāja with a comparative study of the **Śabdānuśāsana** of Bhaṭṭākaḷaṅka. His discussions bristle with scholarship, breadth of vision and the grasp of the spirit of Kannada linguistics. For this solid contribution to the grammatical dessertation on Kannada, he deserves the best thanks of the students of Kannada grammar.

Kannada Research Institute, Dharwar
27th August, 52.

R. S. Panchamukhi
Vidyaratna, Director of Kannada Research.

# ಮುನ್ನುಡಿ

ಇಲ್ಲಿ ಪ್ರಕಟಿಸಲ್ಪಟ್ಟ ಉಪನ್ಯಾಸಗಳನ್ನು ಧಾರವಾಡದ ಕನ್ನಡ ಟ್ರೇನಿಂಗ್ ಕಾಲೇಜಿನ ನಿವೃತ್ತ ಕನ್ನಡ ಪಂಡಿತರಾದ **ಶ್ರೀ. ಮ. ಪ್ರ ಪೂಜಾರ** ಇವರು ಕನ್ನಡ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ೧೯೬೨ ರ ಮಾರ್ಚ ತಿಂಗಳ ೨೭, ೨೮ ದಿನಾಂಕಗಳಲ್ಲಿ ಕೊಟ್ಟರು. ಕನ್ನಡ ಭಾಷೆ, ವ್ಯಾಕರಣ, ವಾಙ್ಮಯಗಳನ್ನು ಕುರಿತು ಈಗಾಗಲೇ ಅನೇಕ ವಿದ್ವಾಂಸರು ಈ ಸಂಸ್ಥೆಯ ಆಮಂತ್ರಣದಿಂದ ಉಪನ್ಯಾಸಗಳನ್ನು ಕೊಟ್ಟಿದ್ದಾರೆ ಈಗ ಶ್ರೀ. ಪಂಡಿತ ಪೂಜಾರರವರು ಕನ್ನಡದ ವ್ಯಾಕರಣ ಗ್ರಂಥಗಳಾದ ಶಬ್ದಮಣಿದರ್ಪಣ ಶಬ್ದಾನುಶಾಸನಗಳನ್ನಧಿಕರಿಸಿ ಕೆಲವು ವಿಶಿಷ್ಟ ವಿಷಯಗಳ ಬಗ್ಗೆ ತಮ್ಮ ಸಂಶೋಧನಗಳನ್ನು ವಿದ್ವಾಂಸರ ಮುಂದೆ ಇಟ್ಟಿದ್ದಾರೆ. ಅವುಗಳಲ್ಲಿ ಕೆಳಗಿನ ವಿಚಾರಗಳು ಮಹತ್ವದವಾಗಿವೆ:—

(೧) ಕನ್ನಡ ಭಾಷೆಗೆ ಶಿಕ್ಷಾಗ್ರಂಥದ ಆವಶ್ಯಕತೆ.

(೨) ಱ ೞ ಗಳ ಮೂಲ, ಱ ಱ, ೞ ೞ ಗಳ ಪ್ರಾಸ, ಕೇಶಿರಾಜನ ಕಾಲದಲ್ಲಿ ಈ ಅಕ್ಷರಗಳ ಉಚ್ಚಾರಣೆಯಲ್ಲಿ ಬಿಗುವು ಸಡಿಲಾದದ್ದು, ಅದಕ್ಕಾಗಿ ಮಾಡಿದ ಪ್ರಯತ್ನಗಳ ವೈಫಲ್ಯ.

(೩) ಅಲ್ಲದೆ, ಅಲ್ಲದು, ಅಲ್ಲ ಶಬ್ದಗಳ ವಿಚಾರ.

(೪) ಕನ್ನಡದಲ್ಲಿ ಶ್ರುತಿಕಟು ಸಂಧಿ ವಿಚಾರ.

ಕೇಶಿರಾಜನಲ್ಲಿ ವೈಯಾಕರಣನ ಶಾಸ್ತ್ರೀಯತೆಯು ಕಡಮೆಯಿರುವದೆಂಬುದನ್ನು ವ್ಯಾಖ್ಯಾತರು ಅಲ್ಲಲ್ಲಿ ಸಮರ್ಪಕವಾದ ಉದಾಹರಣೆಗಳಿಂದ ತೋರಿಸಿಕೊಟ್ಟಿದ್ದಾರೆ. ಲಿಂಗವೆಂದರೆ ಪ್ರಾತಿಪದಿಕವೆಂದು ಅರ್ಥಹೇಳಿ ಕನ್ನಡದಲ್ಲಿ ಲಕ್ಷಕ ಶಬ್ದಗಳಂತೆ ವ್ಯಂಜಕ ಶಬ್ದಗಳೂ ಲಿಂಗಗಳಾಗುವವೆಂಬದನ್ನು ಸಮರ್ಥಿಸಿದ್ದಾರೆ.

ಅಲ್ಲದೆ, ಅಲ್ಲದು, ಅಲ್ಲ ಗಳ ವಿಚಾರವು ಕನ್ನಡ ವ್ಯಾಕರಣ ಚರ್ಚೆಯಲ್ಲಿ ಹೊಸದೂ ವಿಮರ್ಶೆಗೆ ಹೆಚ್ಚು ಅವಕಾಶವನ್ನು ಕೊಡುವಂಥದೂ ಇದೆ. ಉಪನ್ಯಾಸಕರು ಈ ವಿಷಯವನ್ನು ನಿರ್ಧಾರಣಾರ್ಥ, ಅವಧಾರಣಾರ್ಥ, ಅನಿಯೋಗ– ವ್ಯವಹೃತಿ ಎಂಬ ಶಾಸ್ತ್ರೀಯ ವಿವೇಚನೆಯಿಂದ ಪೋಷಿಸಿ ಚೆನ್ನಾಗಿ ಮಂಡಿಸಿದ್ದಾರೆ. 'ಅಲ್ಲ' ಎಂಬ ಪ್ರಯೋಗದ ಮೂಲವನ್ನು ತಿಳಿದುಕೊಳ್ಳಲು ಈ ವಿಮರ್ಶೆಯು

ಆತುರಪಟ್ಟಿದೆ. 'ಅಲ್ಲದೆ' ಇಡಿಯ ಶಬ್ದವು ನಿರ್ಧಾರಣಾರ್ಥಕವೆಂದು ಕೇಶಿರಾಜನು ಹೇಳಿದ್ದು ಅಶಾಸ್ತ್ರೀಯ ಅವನು ನಿರ್ಧಾರಣ, ಅವಧಾರಣ ಶಬ್ದಗಳನ್ನು ಭಿನ್ನಾರ್ಥಕ ಗಳಾಗಿದ್ದರೂ ಸಂಕೀರ್ಣವಾಗಿ ಉಪಯೋಗಿಸಿದ್ದೂ ಈ ಭಾವನೆಯನ್ನು ಬಲಪಡಿಸು ತ್ತದೆ. 'ಅಲ್ಲದೆ' ಶಬ್ದವನ್ನು ಅಲ್ಲದು+ಎ ಎಂದು ವಿಭಾಗಿಸಿ ಹೇಳದೆ, ಕೇಶಿರಾಜನು ಅಖಂಡಪದವೆಂದು ಭಾವಿಸಿ ಅದಕ್ಕೆ ಅವಧಾರಣೆಯ ಪರ್ಯವಸಿತ ಅರ್ಥವನ್ನು ಕಲ್ಪಿಸಿದಂತೆ ತೋರುತ್ತದೆ. ಈ ಅವಧಾರಣೆಯಲ್ಲಿ ನಿಷೇಧಾರ್ಥವು ಲೀನವಾಗಿದೆ. 'ಅಲ್ಲದೆ' ಶಬ್ದ ಪ್ರಯೋಗವಾದಾಗ ಮುಂದೆ ಕ್ರಿಯಾಪ್ರತಿಷೇಧದ ಶಬ್ದವು ಬರಲೇ ಬೇಕು. 'ದೇವರನಲ್ಲದೆ ಪೊಗೞೆಂ' ದೇವರನಲ್ಲದೆ ಎಂಬ ನಿಷೇಧಾರ್ಥವುಳ್ಳ ಅವ ಧಾರಣೆ; ಪೊಗೞೆಂ=ಹೊಗಳುವಿಕೆಯ ಪ್ರತಿಷೇಧ; ಇವೆರಡೂ ಸೇರಿ ದೇವರನ್ನೇ ಹೊಗಳುವೆನು ಎಂಬ ಅರ್ಥವನ್ನು ತಂದುಕೊಡುತ್ತವೆ. ಈ ನಿಷೇಧದ್ವಯವು ಪ್ರಕೃ ತಾರ್ಥವನ್ನು ಸಾತಿಶಯವಾಗಿ ತಿಳಿಸುತ್ತದೆ. 'ಸಂಭಾವ್ಯ ನಿಷೇಧ ನಿವರ್ತನೇ ನಞ್ ದ್ವಯಂ ( —ವಾಮನಃ ), 'ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ' ಇತ್ಯಾದಿ ವಚನಗಳು ಈ ಅರ್ಥಕ್ಕೆ ಸಾಧಕವಾಗಿವೆ. ಉಪನ್ಯಾಸಕರು ಅಲ್ಲದೆ ಎಂಬುದಕ್ಕೆ ಈ ಅರ್ಥವನ್ನು ಹಚ್ಚಲಿಕ್ಕೆ ಅಲ್ಲದು+ಎ ಎಂದು ವಿಭಾಗಿಸಿ ಅಲ್ಲದು=ತದ್ಭಿನ್ನಾರ್ಥ, ಎ=ಅವಧಾರಣಾರ್ಥ ಎಂದು ಅರ್ಥ ಹೇಳಿದ್ದು ಸುಲಭ ಗ್ರಾಹ್ಯವೂ ಒಳ್ಳೆಯ ಯುಕ್ತಿಯುಕ್ತವೂ ಆಗಿದೆ.

ಅವರು ಶ್ರುತಿಕಟುಸಂಧಿಯು ಕನ್ನಡದಲ್ಲಿ ತ್ಯಾಜ್ಯವೆಂದು ಹೇಳಲು ಸಂಧಿ ದೋಷವನ್ನು ವಿವರಿಸುವ 'ಪರಪದಪೂರ್ವಂ ದ್ವಿತ್ವಾಕ್ಷರವಾಗಿರೆ . . . .' **ದ. ಸೂ. ೫೯,** ಮತ್ತು 'ಬಗೆಯದೆ ಸತ್ಯಣಾಭ್ಯವಹಾರಿಗಳುಸಿರ್ವರ್ . . . .' **ದ. ಸೂ. ೬೦.** ಈ ಎರಡು ಸೂತ್ರಗಳನ್ನು ಶಾಸ್ತ್ರೀಯವಾಗಿ ಚರ್ಚಿಸಿ ಉಪನ್ಯಾಸದ ಗಂಭೀರತೆಯನ್ನೂ ತಮ್ಮ ಸಂಶೋಧನಾಪಟುತ್ವವನ್ನೂ ವ್ಯಕ್ತಗೊಳಿಸಿದ್ದಾರೆ.

ಕೃದಂತನಾಮಗಳು ವಿಶೇಷಣಗಳಂತೆ ಪ್ರಯೋಗಿಸಲ್ಪಟ್ಟಾಗ ವಿಶೇಷ್ಯದಿಂದ ವ್ಯವಧಾನವಿರಲಿ, ಇಲ್ಲದಿರಲಿ ಅವು ಸಾಧುಪ್ರಯೋಗಗಳು. ಅವ್ಯವಧಾನವಿದ್ದಾಗ 'ಪಾಡುವ ತುಂಬಿ' ಇತ್ಯಾದಿ ಸ್ಥಳಗಳಲ್ಲಿ ಸಮಸ್ತವಾಗಿ ಬರುತ್ತವೆ. ಈ ಸಮಾ ಸಕ್ಕೆ ಗಮಕಸಮಾಸವೆನ್ನುತ್ತಾರೆ. ಕನ್ನಡದ **ಗಮಕಸಮಾಸದ** ಅರ್ಥವೇನು, ಸಂಸ್ಕೃತದಲ್ಲಿ 'ಸಾಪೇಕ್ಷತ್ವೇಪಿ ಗಮಕತ್ವಾತ್ ( ಶಿಷ್ಟಪ್ರಯೋಗರೂಪನಿಯಾಮಕ ಸದ್ಭಾವಾತ್ ) ಸಮಾಸಃ' ಎಂದು ಹೇಳುವರು. ಕನ್ನಡದಲ್ಲಿ ಇದೇ ಅರ್ಥದಲ್ಲಿ ಗಮಕಸಮಾಸಪದವು ರೂಢವಾಗಿದೆಯೆಂದು ತೋರಿಸಿದ್ದಾರೆ. ಜಗನ್ನಾಥವಿಜಯದ 'ಶ್ರೀ ರಾಮಾನಟ' ಎಂಬ ಆದ್ಯಶ್ಲೋಕವನ್ನು ಕೃದಂತಗಳು ಷಟ್ಕಾರಕಾರ್ಥ

ಗಳಲ್ಲಿ ಉಪಯೋಗಿಸಲ್ಪಡುತ್ತವೆಯೆಂಬುದಕ್ಕೆ ಉದಾಹರಿಸಿ ಅದರ ಮಹತ್ತ್ವವನ್ನೂ ಅಲ್ಲಿಯ ಗಮಕಸಮಾಸದ ಸ್ವರೂಪವನ್ನೂ ಚೆನ್ನಾಗಿ ಚರ್ಚಿಸಿದ್ದಾರೆ.

ಕೇಶಿರಾಜನ ಸೂತ್ರಗಳಲ್ಲಿ ಅಪೂರ್ಣತೆಯನ್ನೂ ಅಶಾಸ್ತ್ರೀಯತೆಯನ್ನೂ ಸೂಚಿಸುತ್ತ ವ್ಯಾಖ್ಯಾನಕಾರರು ಕೇಸಕ್ಕಿ, ಬಿಸುಗದಿರ್, ಪಸುವಂದಲ್ ಎಂಬಲ್ಲಿ ಮೂಲರೂಪವು ಕಿಸಿದು, ಬಿಸಿದು, ಪಸಿದು ಇರುವುದು ಹೆಚ್ಚು ಸಮಂಜಸವಾಗಿದೆ ಯೆಂದು ಚರ್ಚಿಸಿ ತೋರಿಸಿದ್ದಾರೆ ಮತ್ತು ವ. ೭೭ ನೆಯ ಸೂತ್ರದಲ್ಲಿ ಒಳ್ಳಿತು, ಪೊಲ್ಲಿತು . . ಬಿಸಿದು, ಆಸಿದು ಇವುಗಳ ಜೊತೆಗೆ ಈ ಮೇಲಿನ ಗುಣವಾಚಕ ಶಬ್ದ ಗಳನ್ನು ಸೇರಿಸಿದ್ದರೆ ನೆಟ್ಟಗಾಗುತ್ತಿತ್ತೆಂದೂ ದರ್ಪಣ-ಶಾಸನಕಾರರು ದ್ರಾವಿಡ ಪ್ರಾಣಾಯಾಮದಿಂದ ಕೆಚ್ಚನೆ, ಬೆಚ್ಚನೆ, ಪಚ್ಚನೆಗಳಿಂದ ಈ ರೂಪಗಳ ನಿಷ್ಪತ್ತಿಯನ್ನು ಹೇಳಲಿಕ್ಕೆ ಹೊರಟಿದ್ದು ಗೌರವಮೋಷಯುಕ್ತವಾದದ್ದೆಂದೂ ಹೇಳಿದ್ದಾರೆ.

ಆಮೇಲೆ ವ್ಯಾಖ್ಯಾತರು ಕನ್ನಡದಲ್ಲಿ ಅಂಶಿಸಮಾಸ, ಬಹುವ್ರೀಹಿ ಸಮಾಸ ಗಳ ಸ್ವರೂಪವನ್ನು ವಿವರಿಸಿರುವರು. 'ಇವ ಸಮಾಸ' ವನ್ನು ಸಮಾಸಗಳ ಪಟ್ಟಿಯಲ್ಲಿ ಸೇರಿಸಬೇಕೆಂದು ಹೇಳಿದ್ದು ಉಪನ್ಯಾಸಕರ ಪ್ರಯೋಗ ಪರಿಣತಿಯ ಪರಿಚಯವನ್ನೂ ಶಾಸ್ತ್ರೀಯ ಸಂಶೋಧನಗುಣವನ್ನೂ ತೋರಿಸುತ್ತವೆ.

ವೈ. ಕುಂಡಲಗಿರಿ ಆಚಾರ್ಯರು ಬರೆದ ಭಟ್ಟಾಕಲಂಕ ಪಂಡಿತನ ಕನ್ನಡ ಶಬ್ದಾನುಶಾಸನ ವ್ಯಾಕರಣದ ಕನ್ನಡ ಟೀಕೆಯ ನಾಲ್ಕನೆಯ ಪಾದದ ಟೀಕಾ ಗ್ರಂಥವು ನಷ್ಟವಾಗಿ ಹೋಗಿರಲು ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದವರು ಪಂಡಿತ ಪೂಜಾರರವರಿಂದ ಆ ನಾಲ್ಕನೆಯ ಪಾದದ ಟೀಕೆ ಯನ್ನು ಬರೆಸಿರುವದು ಎಲ್ಲರಿಗೂ ಗೊತ್ತಿದ್ದ ಸಂಗತಿ.

**ಶ್ರೀ. ಪಂಡಿತ ಮಹಾದೇವಶಾಸ್ತ್ರಿ ಪೂಜಾರರವರ** ಈ ಎರಡು ಉಪನ್ಯಾಸ ಗಳಿಂದ ಅವರ ಕನ್ನಡ ವ್ಯಾಕರಣಶಾಸ್ತ್ರದಲ್ಲಿಯ ವೈದುಷ್ಯವೂ ವಿಮರ್ಶಾಪಟುತ್ವವೂ ಸ್ಪಷ್ಟವಾಗುತ್ತವೆ. ಉಪನ್ಯಾಸಗಳು ಚಿಕ್ಕವಾಗಿ ತೋರಿದರೂ ಅರ್ಥಗರ್ಭಿತ ವಾಗಿವೆ. ಅನೇಕ ಜಟಿಲ ಪ್ರಶ್ನೆಗಳಿಗೆ ಹಗುರಾದ ಉತ್ತರವು ದೊರಕುತ್ತದೆ. ಶಾಸ್ತ್ರಿಗಳು ಕನ್ನಡ ಭಾಷೆ, ಪ್ರಯೋಗ, ವ್ಯಾಕರಣಗಳ ತಿರುಳು ತಮಗೆ ಕರತಲಾ ಮಲಕವಾಗಿವೆಯೆಂಬುದನ್ನು ಒಳ್ಳೆಯ ಗಂಭೀರವಾದ ಶಾಸ್ತ್ರೀಯ ಚರ್ಚೆ ಗಳಿಂದಲೂ ನಿಃಶಂಕವಾದ ವಿವೇಚನೆಯಿಂದಲೂ ತೋರಿಸಿದ್ದಾರೆ. ಈ ಎರಡು ಸೂತ್ರರೂಪದಂತೆ ಇದ್ದ ಉಪನ್ಯಾಸಗಳನ್ನು ಎರಡು ದೊಡ್ಡ ಹೊತ್ತಿಗೆಗಳಾಗುವಂತೆ ಬೆಳೆಸಿ ಹೇಳಲಿಕ್ಕೆ ಅವರಿಗೆ ಬರುತ್ತಿದ್ದರೂ ಶಾಸ್ತ್ರೀಯ ಮರ್ಯಾದೆಯನ್ನು

ಕೊಂಡು ವಿಷಯವನ್ನು ಮಿತ ಅನತಿಪ್ರಸಕ್ತವಾದ ಭಾವಗಂಭೀರ ಶಬ್ದ ಗಳಿಂದ ಸಂಕ್ಷೇಪವಾಗಿ ಹೇಳಿದ್ದು ಶಾಸ್ತ್ರಿಗಳಿಗೆ ಭೂಷಣವೇ ಸರಿ.

ಶ್ರೀ. ಪೂಜಾರರವರು ಇಂಥ ಅಮೌಲ್ಯವಾದ ವಿದ್ವತ್ತಾಪೂರ್ಣವಾದ ಸಂಶಯಾನಾಸ್ಕಂದಿತವಾದ, ಕನ್ನಡ ವ್ಯಾಕರಣದ ನಿರ್ಣಯಾತ್ಮಕ ಪ್ರಮೇಯ ಗಳನ್ನು ಕೊಟ್ಟು ವ್ಯಾಕರಣಶಾಸ್ತ್ರವನ್ನು ಓದಲಿಚ್ಛಿಸುವ ಜಿಜ್ಞಾಸುಗಳಿಗೆ ಅತ್ಯಂತ ಉಪಕಾರವನ್ನು ಮಾಡಿದ್ದಾರೆ. ಅವರಿಗೆ ನಮ್ಮ ಸಬಹುಮಾನ ಅಭಿನಂದನೆ ಗಳನ್ನು ಸಲ್ಲಿಸುತ್ತೇವೆ.

ಧಾರವಾಡ
೨೬-೮-೧೯೫೨

**ರಾ. ಸ್ವಾ. ಪಂಚಮುಖಿ**
ವಿದ್ಯಾರತ್ನ, ಡೈರೆಕ್ಟರ್, ಕನ್ನಡ ರಿಸರ್ಚ್
ಇನ್ಸ್ಟಿಟ್ಯೂಟ್.



ಪಂಡಿತ ಮ. ಪ್ರ. ಪೂಜಾರ

( ಉಪನ್ಯಾಸಕರು )

# ಕೆಲವು ಕನ್ನಡವ್ಯಾಕರಣ ವಿಚಾರಗಳು

( ದರ್ಪಣ ಶಾಸನಗಳನ್ನಧಿಕರಿಸಿ )



**ವಾಕ್ಯಕಾರಂ ವರರುಚಿಂ ಭಾಷ್ಯಕಾರಂ ಪತಂಜಲಿಮ್**
**ಪಾಣಿನಿಂ ಸೂತ್ರಕಾರಂ ಚ ಪ್ರಣತೋऽಸ್ಮಿ ಮುನಿತ್ರಯಮ್ ।**

[ವಾರ್ತಿಕಕಾರನಾದ ವರರುಚಿ, ಭಾಷ್ಯಕಾರನಾದ ಪತಂಜಲಿ, ಸೂತ್ರಕಾರನಾದ ಪಾಣಿನಿ ಈ ಸಂಸ್ಕೃತ ಮುನಿತ್ರಯಕ್ಕೆ ಪ್ರಣಾಮಗಳು.]

ಶಬ್ದಸ್ಮೃತಿ ಭಾಷಾಭೂಷಣಕಾರನಾದ ನಾಗವರ್ಮ, ಶಬ್ದಮಣಿದರ್ಪಣಕಾರನಾದ ಕೇಶಿರಾಜ, ಶಬ್ದಾನುಶಾಸನಕಾರನಾದ ಭಟ್ಟಾಕಲಂಕ ಈ ಕನ್ನಡ ಮುನಿತ್ರಯಕ್ಕೆ ವಂದನೆಗಳು.

[ ಸಂಸ್ಕೃತ ಮುನಿತ್ರಯವು ಒಂದೇ ವ್ಯಾಕರಣಗ್ರಂಥವನ್ನು ಪೂರ್ತಿಗೊಳಿಸಿತು. ಕನ್ನಡ ಮುನಿತ್ರಯವು ಪ್ರತ್ಯೇಕವಾಗಿ ವ್ಯಾಕರಣ ಗ್ರಂಥಗಳನ್ನು ಬರೆಯಿತು. ]

## ಉಪನ್ಯಾಸ ೧.

### ಅಕ್ಷರ

ವ್ಯಾಕರಣಶಾಸ್ತ್ರದ ಆರಂಭದಲ್ಲಿ ಅಕ್ಷರವಿಚಾರವನ್ನು ಹೇಳುವದು ಸಂಪ್ರದಾಯವು. ಆಪ್ರೇರೆಗೆ ದರ್ಪಣಕಾರನೂ ಶಾಸನಕಾರನೂ ತಮ್ಮ ವ್ಯಾಕರಣಗಳ ಆರಂಭದಲ್ಲಿ ಅಕ್ಷರವಿಚಾರವನ್ನು ಹೇಳಿದರು. ದರ್ಪಣಕಾರನ ಅಕ್ಷರಪ್ರಕರಣದಲ್ಲಿ ಎ ಒ ಸ್ವರಗಳು, ಮಹಾಪ್ರಾಣಗಳು, ಱ ೞ ಕಾರಗಳು ಮುಂತಾದವುಗಳ ವಿಚಾರವನ್ನು ಆತನು ಕನ್ನಡಭಾಷಾಸ್ವರೂಪದ ಕಲ್ಪನೆ ಕೊಡುವದಕ್ಕೆ ಸಹಾಯಕವೆಂದು ಹೇಳಿದನೆಂದು ತಿಳಿಯಬೇಕು.

ದರ್ಪಣಕಾರನು ಅಕ್ಷರೋತ್ಪತ್ತಿ ವಿಚಾರವನ್ನು

**ಅನುಕೂಲಪವನನಿಂ ಜೀ**
**ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ।**
**ಗಿನವೊಲ್ ಶಬ್ದದ್ರವ್ಯಂ**
**ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ॥ ದ. ೨**

**ತನು ವಾದ್ಯಂ ನಾಲಗೆ ವಾ**
**ದನದಂಡಂ ಕರ್ತೃವಾತ್ಮನವನ ಮನೋವೃ।**
**ತ್ತಿ ನಿಮಿತ್ತಮಾಗೆ ಶಬ್ದಂ**
**ಜನಿಯಿಸುಗುಂ ಧವಳವರ್ಣಮಕ್ಷರರೂಪಂ॥ ದ. ೩೪**

ಈ ಎರಡು ಸೂತ್ರಗಳಲ್ಲಿ ಹೇಳಿರುತ್ತಾನೆ. ಮೊದಲನೆಯ ಸೂತ್ರದಲ್ಲಿ ಸಾಮಾನ್ಯವಾದ ಧ್ವನಿಯ ಉತ್ಪತ್ತಿಯನ್ನು, ಎರಡನೆಯ ಸೂತ್ರದಲ್ಲಿ ಅಕ್ಷರರೂಪಧ್ವನಿಯ ಉತ್ಪತ್ತಿಯನ್ನು ಹೇಳುತ್ತಾನೆ. ಮಾತನಾಡಬೇಕೆಂಬ ಜೀವನ ಇಚ್ಛೆಯ ಮೇರೆಗೆ ಶಾರೀರಪವನನ ಅನುಕೂಲತೆಯಿಂದ ಮೊದಲು ನಾಭಿಮೂಲದಲ್ಲಿ ಶಬ್ದವು ಹುಟ್ಟುತ್ತದೆ. **ಶಬ್ದವು ಒಂದು ದ್ರವ್ಯವು**; ಅದು ಬಿಳಿಯ ಬಣ್ಣದ್ದು; ಅದು ಕಹಳೆಯಂತೆ ಆಗುವದು; ನಮ್ಮ ಕಂಠದಿಂದ ಹೊರಬೀಳುವ ಧ್ವನಿ ಆ ಶಬ್ದದ್ರವ್ಯದ ಕಾರ್ಯರೂಪವು. ಈ ನಿರೂಪಣೆಯನ್ನು 'ಶಿಕ್ಷಾ' ಗ್ರಂಥದಲ್ಲಿ ಹೇಳಿದ ಪಾಣಿನಿಮತಕ್ಕೆ ಹೋಲಿಸಿ ನೋಡಬಹುದು:

**ಆತ್ಮಾ ಬುಧ್ವಾ ಸಮೇತ್ಯಾರ್ಥಾನ್ ಮನೋಯುಙ್ಕ್ತೇ ವಿವಕ್ಷಯಾ**
**ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್**
**ಮಾರುತಸ್ತೂರಸಿ ಚರನ್ ಮಂದ್ರಂ ಜನಯತಿ ಸ್ವರಮ್।**

(—ಪಾಣಿನಿ ಶಿಕ್ಷಾಗ್ರಂಥ)

[ ಆತ್ಮನು ವಿಷಯಗಳನ್ನು ತಿಳಿದುಕೊಂಡು ಪರರಿಗೆ ಮಾತಾಡಿ ತಿಳು ಹಲು ಬಯಸಿ ಮನಸ್ಸನ್ನು ಪ್ರೇರಿಸುತ್ತಾನೆ. ಮನಸ್ಸು ಶಾರೀರ ಅಗ್ನಿಯನ್ನು ( ಶಾರೀರ ತೇಜಸ್ಸನ್ನು ) ಕೆರಳಿಸುತ್ತದೆ. ಅದು ಶಾರೀರ ಮಾರುತನನ್ನು ಪ್ರೇರಿ ಸುತ್ತದೆ. ಆ ಮಾರುತನು ಉರಸ್ಸಿನಲ್ಲಿ ಸಂಚರಿಸುತ್ತ ಮಂದ್ರವಾದ ಧ್ವನಿ ಯನ್ನು ಉಂಟುಮಾಡುತ್ತಾನೆ. ]

ಮುಂದೆ ಈ ಧ್ವನಿಯು ಕಂಠದಿಂದ ನಮ್ಮ ಮುಖಯಂತ್ರವನ್ನು ಪ್ರವೇ ಶಿಸಿ " ತನು ವಾದ್ಯಂ ನಾಲಗೆ ವಾದನದಂಡಂ " ಎಂದು ದರ್ಪಣಕಾರನು ಹೇಳಿದಂತೆ,

**ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಂಠಃ ಶಿರಸ್ತಥಾ ।**
**ಜಿಹ್ವಾಮೂಲಂ ಚ ದಂತಾಶ್ಚ ನಾಸಿಕೋಷ್ಠೌ ಚ ತಾಲು ಚ ॥**

(— ಪಾಣಿನಿ ಶಿಕ್ಷಾಗ್ರಂಥ)

ಎಂಬ ಪ್ರಾಚೀನರ ಮತದಂತೆ ಉರಸ್ಸು ಕಂಠ ಶಿರಸ್ಸು ಮುಂತಾದ ಎಂಟು ಸ್ಥಾನಗಳ ಸಹಾಯದಿಂದ ಬೇರೆಬೇರೆ ಅಕ್ಷರಗಳಾಗಿ ಪರಿಣಮಿಸುತ್ತದೆ.

ಶಬ್ದವು ಸಾಮಾನ್ಯಧ್ವನಿರೂಪವಾಗಿರಲಿ ಅಕ್ಷರರೂಪವಾಗಿರಲಿ ಅದು ದ್ರವ್ಯವೆಂದು ಹೇಳಿದ್ದು ವಿಚಾರಣೀಯವಾಗಿರುವದು. ಶಬ್ದವು ದ್ರವ್ಯವೆಂದ ಬಳಿಕ ಅದಕ್ಕೆ ಗುಣವು ಬೇಕು. ಶ್ವೇತರೂಪವು ( ಬಿಳಿಯತನವು ) ಅದರ ಗುಣವಂತೆ. ಪುದ್ಗಲಸ್ಕಂಧ ( ಪರಮಾಣು ಸಮುದಾಯ ) ಗಳ ಆಘಾತದಿಂದ ಧ್ವನಿಯು ಹುಟ್ಟುವದೆಂದು ಜೈನರ ಮತವು. ಪುದ್ಗಲಸ್ಕಂಧಗಳ ಆಘಾತದಿಂದ ಉಂಟಾಗಿ ತಾನೂ ಪುದ್ಗಲರೂಪವಾಗಿಯೇ ಇರುವದೆಂದು ಜೈನರು ಹೇಳು ವಂತೆ ತೋರುತ್ತದೆ. ಅವರ ಮತದಲ್ಲಿ ಕರ್ಮವು ಕೇವಲ ಕ್ರಿಯೆಯಲ್ಲ, ಪುದ್ಗಲರೂಪವು; ' ಜ್ಞಾನಾವರಣೀಯ ' ಮೊದಲಾದ ಪುದ್ಗಲರೂಪ ಕರ್ಮಗಳು ಆತ್ಮನನ್ನು ಆವರಿಸುತ್ತವೆಯೆಂದು ಜೈನರು ಹೇಳುತ್ತಾರೆ. ದರ್ಪಣದ ಈ ಸೂತ್ರಕ್ಕೆ ಅರ್ಥವನ್ನು ಬರೆಯುವಾಗ ಸಿಟ್ಟೂರ ನಂಜಯ್ಯನವರು— " ಶಬ್ದ ದ್ರವ್ಯಮೆಂದೊಡೆ ಘಟಕ್ಕೆ ಮೃತ್ತಿಕೆಯೆಂತಂತೆ ಅಕ್ಷರಾತ್ಮಕವಾದ ಶಬ್ದಂಗಳ್ ಪುಟ್ಟುವುದರ್ಕೆ ಉಪಾದಾನಕಾರಣವಾದ ವಸ್ತು ಎಂದಱಿವುದು; ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇೞ್ವಪರ್ " ಎಂದು ಹೇಳಿದ್ದಾರೆ. ಆದರೆ ಜೈನೇತರ ಪ್ರಾಚೀನರು—'ಶಬ್ದವು ಒಂದು ಗುಣ, ಅದು ದ್ರವ್ಯಾಶ್ರಿತ,' " ಶಬ್ದಗುಣಕಂ ಆಕಾಶಂ " — ಆಕಾಶವು ಶಬ್ದವೆಂಬ ಗುಣವುಳ್ಳದ್ದು—ಎಂದರೆ ಶಬ್ದವು ಆಕಾಶ

ವೆಂಬ ದ್ರವ್ಯದ ಗುಣವು; ಹೇಗೆ ಗಂಧವು ಪೃಥ್ವಿಯ ಗುಣವೋ, ಶೀತಸ್ಪರ್ಶವು ನೀರಿನ ಗುಣವೋ ಹಾಗೆ ಶಬ್ದವು ಆಕಾಶದ ಗುಣವು ಎಂದು ಹೇಳಿದ್ದಾರೆ. ಆಧುನಿಕ ವೈಜ್ಞಾನಿಕರು ಶಬ್ದವು ದ್ರವ್ಯವು ( matter ) ಎಂದು ಹೇಳುವಂತೆ ತೋರಲಿಲ್ಲ. ಇದು ಏನೇ ನಿಜವಿದ್ದರೂ ಮತಭೇದದ ವಿಷಯವು. ಮುಂದೆ ಸಾಗುವ.

ಗುಡುಗು ಪಶು ಪಕ್ಷಿಗಳ ಭಿನ್ನಭಿನ್ನ ಧ್ವನಿಗಳು — ನಮ್ಮ ಉಚ್ಚರಣೆಗೆ ಸಿಲುಕದವು— ಅಕ್ಷರಗಳಲ್ಲವೆಂದೂ ಉಚ್ಚರಣೆ ನಿಷ್ಪೃಷ್ಟವಾಗಿ ( ಬರೆಹಕ್ಕೆ ಅನುಕೂಲಿಸುವಂತೆ ) ಇರುವಂಥವೇ ಅಕ್ಷರಗಳೆಂದೂ ಹೇಳಿ ( ದ. ಸೂ. ೨ ) ದರ್ಪಣಕಾರನು **ಅಕ್ಷರಗಳು ಶ್ರಾವಣ** ( ಶ್ರವಣೇಂದ್ರಿಯ ಗೋಚರ ) **ಚಾಕ್ಷುಷ** ( ಚಕ್ಷುರಿಂದ್ರಿಯಗೋಚರ ) ಎಂದು ಎರಡು ಬಗೆಯಾಗಿರುವವೆಂದು ಹೇಳುತ್ತಾನೆ. ಅಕ್ಷರಗಳು ಧ್ವನಿರೂಪವಾದಂಥವೇ, ಎಂದರೆ ಶ್ರವಣೇಂದ್ರಿಯ ಗೋಚರವಾದಂಥವೇ ಹೊರತು ಚಾಕ್ಷುಷವಾದಂಥವು—( ಬರೆಹದಲ್ಲಿರುವಂಥವು )— ಲಿಪಿರೂಪವಾಗಿರುವಂಥವು ಅಕ್ಷರಚಿತ್ರಗಳೇ ಹೊರತು ಅಕ್ಷರಗಳಲ್ಲ; ಅವನ್ನು ಅಕ್ಷರಗಳೆಂದು ಹೇಳುವದು ಗೌಣ, ರೂಢಿ ಅಷ್ಟೇ. ಆದದರಿಂದ ದರ್ಪಣಕಾರನು ಅಕ್ಷರಗಳಲ್ಲಿ 'ಚಾಕ್ಷುಷ' ಎಂಬ ಪ್ರಕಾರವನ್ನು ಹೇಳಿದ್ದು ಅಷ್ಟೊಂದು ಉಚಿತವಾಗಿಲ್ಲ.

ಅಕ್ಷರಗಳ ಎಣಿಕೆಯನ್ನು ಮಾಡುತ್ತ ದರ್ಪಣಕಾರನು ೫೨ ಸಂಖ್ಯೆಯನ್ನು ತೋರಿಸಿದ್ದರೂ (ಸೂ. ೩೨) ಅದರಲ್ಲಿ ೯ ಪ್ಲುತಗಳನ್ನೂ ಱ ೞ ಗಳನ್ನೂ ಸೇರಿಸಿದರೆ ೬೩ ಆಗುವದು. ಶಾಸನಕಾರನು 'ಸಿದ್ಧಾ ಹಿ ಶುದ್ಧಕಾಃ' ಎಂಬ ತನ್ನ ಮೊದಲನೆಯ ಸೂತ್ರಕ್ಕೆ ಉದಾಹರಿಸಿದಲ್ಲಿ ಮತ್ತು ವ್ಯಾಖ್ಯಾನದಲ್ಲಿ ಮೂಲವರ್ಣಗಳು ೬೪ ಎಂದು ಹೇಳಿದ್ದಾನೆ. ಶಾಸನಕಾರನು ೞ ಕಾರವನ್ನು ಳ ಕಾರದ ಒಂದು ಭೇದವೆಂದು ಹೇಳಿ ಅದನ್ನು ಪ್ರತ್ಯೇಕವಾಗಿ ಎಣಿಸಿಲ್ಲ. ಆದದರಿಂದ ೬೪ ಎಂದು ಹೇಳಿದನು. ೞ ಕಾರವನ್ನೂ ಹಿಡಿದರೆ ೬೫ ಎಂದು ಹೇಳಿದಂತಾಯಿತು. ಈತನಿಗೆ ಸಂಸ್ಕೃತ ಶಬ್ದಗಳನ್ನೊಳಗೊಂಡ ಕನ್ನಡ ಭಾಷೆಯಲ್ಲಿ ಇರಬೇಕಾದ ಮತ್ತು ನಾವು ಅನುಕರಣಮಾಡುವಾಗ ಬರಬಹುದಾದ ಖ಼, ಙ಼ ಇವುಗಳನ್ನೂ ಸೇರಿಸಿ, ಮಹಾಪ್ರಾಣಗಳು ಅಚ್ಚಗನ್ನಡದಲ್ಲಿ ಇರಲಿ ಬಿಡಲಿ ಸಂಸ್ಕೃತ ಶಬ್ದಗಳಲ್ಲಿ ಬರುವದರಿಂದ ಅವನ್ನೂ ಹಿಡಿದು ವ್ಯಾಪಕದೃಷ್ಟಿಯಿಂದ ಹೇಳಿದ್ದಾನೆ. ದರ್ಪಣಕಾರನು ಪ್ಲುತಗಳನ್ನುಳಿದು ೫೭* ಮೂಲಾಕ್ಷರಗಳೆಂದು

* ಮೂಲಾಕ್ಷರಗಳು ೫೨, ಇವುಗಳಲ್ಲಿ ದೇಶೀಯಾಕ್ಷರಗಳೈದನ್ನು ( ಎ ಒ ಱ ೞ ಳ ) ಕೂಡಿಸಲು ಅಕ್ಷರಸಂಖ್ಯೆ ೫೭.—ದ. ಸೂ. ೩೪

ಹಿಡಿದು [ ಇವುಗಳಲ್ಲಿ ಕನ್ನಡಕ್ಕೆ ಮಾತ್ರ ಎಂದು ಎಣಿಸಲ್ಪಟ್ಟ ಱ, ೞ, ೞ, ಎ, ಒ ಇವು ೫ ಸೇರಿವೆ. ] ಸಂಸ್ಕೃತದ ಅಕ್ಷರಗಳೆನಿಸಿದ ಋ ೠ ಌ ೡ ಶ್ ಷ್ ವಿಸರ್ಗ ಜಿಹ್ವಾಮೂಲೀಯ ಉಪಧ್ಮಾನೀಯ ಕ್ಷ ಳ (ಳ) ಈ ಹತ್ತನ್ನು ಅವುಗಳಿಂದ ಕಳೆಯಲು ಉಳಿದ ೪೭ ಅಕ್ಷರಗಳು ಅಚ್ಚಗನ್ನಡದ ಅಕ್ಷರಗಳೆಂದು ಹೇಳಿದ್ದಾನೆ. ಮಹಾಪ್ರಾಣಗಳು ಖಿಳಿಲ್, ಘಣಘಣ ಮುಂತಾದ ಅನುಕರಣ ಶಬ್ದಗಳಲ್ಲಲ್ಲದೆ ವಕ್ಖಾಣ, ದೆಕ್ಖಾಣ, ಠಕ್ಕಿಸು, ಸುತ್ಥಣೆ ಮುಂತಾದ ಕನ್ನಡ ಶಬ್ದಗಳಲ್ಲಿಯೂ ಇರುವವೆಂದು ಹೇಳಿದ್ದಾನೆ. ಇದೆಲ್ಲ ವಿಚಾರವು ಶಾಸನಕಾರನಿಗೆ ಅನಾವಶ್ಯಕವೆನಿಸಿದರೂ ದರ್ಪಣದಲ್ಲಿ ಹೇಳಿದ್ದು ಕನ್ನಡ ಭಾಷಾಸ್ವರೂಪವನ್ನು ತಿಳಿಯಲು ಸಹಾಯಕವಾಗಿದೆ.

ದರ್ಪಣಕಾರನು **ಸಾನುನಾಸಿಕ ಯವಲ** ಕಾರಗಳನ್ನು (ವುಂಯುಣ ಸಾವೆ ಇಲ್ಲಣ ಮುಂತಾದ ಶಬ್ದಗಳಲ್ಲಿ) ಅನೇಕೋದಾಹರಣಗಳಿಂದ ತೋರಿಸಿ ಕನ್ನಡಿಗರ ಧ್ವನಿವಿಶೇಷ ( tone ) ವನ್ನು ತೋರ್ಪಡಿಸಿದ್ದಾನೆ. ಶಾಸನಕಾರನು ಇಂಥ ವಿಚಾರಗಳನ್ನು ಸೂತ್ರಗಳಿಂದ ನಿರೂಪಿಸಿಲ್ಲವಾದರೂ ವ್ಯಾಖ್ಯಾನದಲ್ಲಿ ಅಲ್ಲಲ್ಲಿ ಇಂಥ ಕೆಲವು ವಿಷಯಗಳು ಬರುತ್ತವೆ.

ಇನ್ನು ಅಕ್ಷರಪ್ರಕರಣದಲ್ಲಿ ದರ್ಪಣಕಾರನ ಜೀವಾಳದ ವಿಷಯವೆಂದರೆ ಱ ೞ ಕಾರಗಳು. ಇವುಗಳಲ್ಲಿ ಱ ಕಾರದ ಬಾಳು ದರ್ಪಣಕಾರನಿಗೆ ಸಂಶಯಾಸ್ಪದವಾಗಿದ್ದಂತೆ ತೋರಲಿಲ್ಲ. ರೇಫವು ಹುಟ್ಟುವ ಸ್ಥಾನವನ್ನು 'ಅತಿಪೀಡನದಿಂ' ( ಹೆಚ್ಚಿಗೆ ಒತ್ತಿ ) ಉಚ್ಚರಿಸಿದರೆ ಱಕಾರವು ಹುಟ್ಟುವದು. ಅಂದರೆ ರೇಫಱಕಾರಗಳ ಉಚ್ಚರಣೆಯಲ್ಲಿ ಸಾಕಾದಷ್ಟು ಭೇದವಿದೆ. ದರ್ಪಣಕಾರನು ಧಾತುಪಾಠದಲ್ಲಿ ಱಕಾರಘಟಿತವಾದ ಸುಮಾರು ೬೦–೭೦ ಧಾತುಗಳನ್ನು ಹೇಳಿದ್ದಾನೆ ಇವಲ್ಲದೆ ಅನೇಕ ನಾಮುಗಳೂ ಱ ಕಾರ ಘಟಿತವಾದಂಥವು ಆ ಕಾಲದಲ್ಲಿ ಬಳಕೆಯಲ್ಲಿದ್ದವು. ಆದದರಿಂದ ಱ ಕಾರದ ಬಾಳಿಗೆ ಭಯವಿಲ್ಲವೆಂದು ಆತನು ತಿಳಿದಿರಬೇಕು. ಆದರೆ ಹೊಸಗನ್ನಡದ ಆರಂಭಕಾಲಕ್ಕೆ ಈ ಅಕ್ಷರವು ಹಿಂದೆ ಬಿದ್ದಿತು. ಎಂದರೆ ಅದರ ಉಚ್ಚರಣೆ ಕನ್ನಡಿಗರ ಬಾಯಿಗೆ ಸಹಜವಾಗಿ ಬಾರದಂತಾಯಿತು.

ಇನ್ನು ೞ ಕಾರವು ಬಹಳ ಪ್ರಭಾವಶಾಲಿಯಾಗಿ ಇದ್ದಿತು. ೞ ಕಾರ ಘಟಿತ ನಾಮಗಳೂ ಧಾತುಗಳೂ ವಿಪುಲವಾಗಿ ಪ್ರಚಲಿತವಾಗಿದ್ದವು. ಡ ಕಾರವು ಹುಟ್ಟುವ ಸ್ಥಾನವನ್ನು ಒತ್ತಿ ಉಚ್ಚರಿಸಿದರೆ ೞ ಕಾರವು ಹುಟ್ಟುವದು. ಳ ೞ ಇವುಗಳ ಉಚ್ಚರಣೆಯಲ್ಲಿ ಸಾಕಾದಷ್ಟು ಭೇದವಿದೆ. ಉದಾ: ಅೞ್,

ಅಳೆ ( ಅೞ್ = ಮಜ್ಜಿಗೆ; ಅಳೆ = ಅಳತೆನೂಡು ). ಕನ್ನಡ ಶಬ್ದಗಳಲ್ಲಿರುವ ರಳ ಕುಳ ಳಕಾರಗಳು, ತದ್ಭವ ಶಬ್ದಗಳಲ್ಲಿರುವ ಕ್ಷಳಸಂಜ್ಞಕ ಳಕಾರ ಹೀಗೆ ಮೂರು ತರದ ಳ ಕಾರಗಳು ಬೇರೆ ಬೇರೆ ಎಂದು ತಿಳಿಯಲ್ಪಡುತ್ತಿದ್ದವು. ಕುಳಕ್ಷಳಗಳ ಉಚ್ಚರಣೆಯಲ್ಲಿ ಭೇದವಿಲ್ಲ. ಆದರೆ ಕುಳ ರಳಗಳ ಉಚ್ಚರಣೆ ಯಲ್ಲಿ ಸಾಕಾದಷ್ಟು ಭೇದವಿದ್ದರೂ ಕಾಲಕ್ರಮದಲ್ಲಿ ಅವುಗಳ ಉಚ್ಚರಣೆಯ ಭೇದವು ಅಳಿಯುತ್ತ ಬಂದಿತು.

**ಇಳಿದಳಿಯನೇಳಿದಂ ಸೂ ।**
**ಕುಳಿಯೋಕುಳಿ ಕಳಱು ಪೆಳಱು ಮುಱುಕುಳಿಯುಳಿಯಂ ॥**
**ಕುಳಿಯಂ ಮೂಳಿಗೆ ಜಾಳಿಗೆ**
**ತಳಿಗೆಯೊಳಿರ್ಬಳಸು ಬಳಸಿಗಂ ಮೊಳೆ ತಾಳಂ ॥** ೨೬

**ಆಳಿಸಿದಂ ಪೇಳಿಸಿದಂ ।**
**ಕೇಳಂ ಜೂದಾಳಿಯುಳಿಲೆ ಕಳವಳಮಾಮೆ ॥**
**ಯ್ಮೇಳಂ ಮಾಳಂ ತಾಳಿಗೆ**
**ಯೊಳಿಗೆಯಿ ುಕುಳಿಯಿುವಾದಿಯಾಗಱ್ ಕುಳನಂ ॥** ೨೭

ಈ ಸೂತ್ರಗಳಲ್ಲಿ ' ಕುಳ ' ಳ ಕಾರದ ಉದಾಹರಣಗಳನ್ನು ದರ್ಪಣ ಕಾರನು ಹೇಳಿದನು. ಕೇಶಿರಾಜನ ಕಾಲದಲ್ಲಿ ೞ ಕಾರವು ಲುಪ್ತವಾಗುತ್ತ ಬಂದಿತು. ಇದು ಆತನಿಗೆ ಸರಿದೋರಲಿಲ್ಲ. ಆತನು ಅದನ್ನು ಬದುಕಿಸಲು ಬೇಕಾದಷ್ಟು ಹೆಣಗಿದನು. ೞ ಕಾರ ಘಟಿತವಾದ ನೂರಾರು ಶಬ್ದಗಳನ್ನು— ಒಂದರಿಂದ ಐದರ ವರೆಗೆ ಅರ್ಥವುಳ್ಳವುಗಳನ್ನು—ಉದಾಹರಿಸಿದ್ದಾನೆ. ಧಾತು ಪಾಠದಲ್ಲಿ ೞಕಾರಾಂತ ಧಾತುಗಳನ್ನು ಸುಮಾರು ಮೂವತ್ತನ್ನು ಕೊಟ್ಟಿ ದ್ದಾನೆ. ಇದಲ್ಲದೆ ೞಕಾರ ( ಮಧ್ಯ ) ಘಟಿತ ಧಾತುಗಳನ್ನೆಷ್ಟೋ ಧಾತು ಪಾಠದಲ್ಲಿ ಹೇಳಿದ್ದಾನೆ. ಆದರೆ ಆತನ ಕಾಲಕ್ಕೇ ಎಷ್ಟೋ ಶಬ್ದಗಳಲ್ಲಿ ೞ ಕಾರವೋ ಳ ಕಾರವೋ ಸಂದೇಹವಿತ್ತು.

**ಝುಳಕಂ ಝುಳಪಿಸಿದಂ ಜೊಂ**
**ಗುಳಿ ಬೊಂಬುಳಿಯಾಳಮಾಳಮುಂತೆ ಶಮಾಳಂ ।**
**ವಳಿಗೆ ನೆಗೞ್ದೊಂದುಳಿ ಜಂ**
**ಗುಳಿ ಪುತ್ತಳಿ ಗೋಳಿ ಘೇಳಿ ೞಟ ಸಂದೇಹಂ ॥** ದ. ೨೫

ಈ ಸೂತ್ರದಲ್ಲಿ ಹೇಳಿದ ಶಬ್ದಗಳಲ್ಲಿ ೞವೋ ಕುಳವೋ ಎಂಬದನ್ನು

ಪ್ರಯೋಗಗಳನ್ನು ನೋಡಿ ನಿರ್ಧರಿಸಬೇಕೆಂದು ಹೇಳಿದನು. ೞ ಕಾರ ಳ ಕಾರಗಳ ಉಚ್ಚಾರಣೆಯಲ್ಲಿ ಭಿನ್ನತೆ ಕಡಿಮೆಯಾಗುತ್ತ ಬರಲು ಸುಸಂಸ್ಕೃತರು ಕೂಡ ೞಕಾರಘಟಿತ ಶಬ್ದಗಳನ್ನು ಳಕಾರ ಘಟಿತಗಳಂತೆ ಉಚ್ಚರಿಸತೊಡಗಿದರು. ಗ್ರಂಥಗಳಲ್ಲಿ ೞ ಕಾರವನ್ನು ಳ ಕಾರವಾಗಿ ಮಾರ್ಪಡಿಸಿ ಉಪಯೋಗಿಸತೊಡಗಿದರು. ಕರ್ನಾಟಕದವರ ನಾಲಗೆಯು ಕ್ರಮವಾಗಿ ೞ ಕಾರವನ್ನು ಸಹಜವಾಗಿ ಉಚ್ಚರಿಸಲಸಮರ್ಥವಾಯಿತು. ತಮಿಳಿನವರು ಈಗಲೂ ೞ ಕಾರವನ್ನು ಸಹಜವಾಗಿ ಉಚ್ಚರಿಸುವರು; ಎಂದರೆ ಪ್ರಚಲಿತ ತಮಿಳಿನಲ್ಲಿ ೞ ಕಾರ ಘಟಿತ ಶಬ್ದಗಳು ಈಗ ಎಷ್ಟೋ ಇರುವವು. ಕನ್ನಡದ ಕವಿಗಳು ಎಚ್ಚರಪಟ್ಟರೂ ಒಂದೇ ಪದ್ಯದ ಪ್ರಾಸಸ್ಥಾನದಲ್ಲಿಯೂ ೞ ಳ ಕಾರಗಳು ಬರತೊಡಗಿದವು. ನಮ್ಮ ನಾಲಗೆ ಯಾವ ಅಕ್ಷರವನ್ನು ಉಚ್ಚರಿಸಲಾರದೋ ಆ ಅಕ್ಷರವನ್ನು ಉಳಿಸಿಕೊಳ್ಳುವುದು ಯಾವ ಕೇಶಿರಾಜನಿಗೂ ಸಾಧ್ಯವಲ್ಲ. ಕೇಶಿರಾಜನು ಮುಮೂರ್ಷುವಾಗಿದ್ದ ೞ ಕಾರಕ್ಕೆ ಹೇಮಗರ್ಭಮಾತ್ರೆಯನ್ನು ತೇದು ಕುಡಿಸಿ ಇನ್ನು ಇದು ಬದುಕಬಹುದೆಂದು ನಂಬಿ ಗತಿಸಿರಬೇಕು. ಆದರೆ ಆತನು ಗತಿಸಿದ ಒಂದು ಶತಮಾನದಲ್ಲಿ — ನಡುಗನ್ನಡದ ಆರಂಭ ಕಾಲದಲ್ಲಿ— ೞ ಕಾರವೂ ಅದರ ಜತೆಗೆ ಱ ಕಾರವೂ ನಮ್ಮ ಬಾಯಿಗೆ ಹೊರತಾದವು. ಕನ್ನಡಿಗರು ಇವುಗಳ ಉಚ್ಚರಣೆಯನ್ನು ಮರೆತರು: ಱ ರ ಕಾರಗಳ ಮತ್ತು ೞ ಳ ಕಾರಗಳ ಉಚ್ಚರಣೆಯಲ್ಲಿ ಭೇದವು ಅಳಿದು ಹೋಯಿತು. ಅಂತೆಯೆ ಹರಿಹರನಂಥ ಹೊಣೆಗಾರನಾದ ಕವಿಯು ಕೂಡ—

“ ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗರಿದು ಮೂರುಂ ತೆರನಂ |

ಆದದರಿಂದ

ನೋಡಬೇಡ ಱ ೞ ಕುಳ ಕ್ಷಳಂಗಳನಿದಱೊಳ್ ||”

ಎಂದು ತನ್ನ ಕಾವ್ಯದಲ್ಲಿ ೞ ಳ ಕಾರಗಳ ಪ್ರಾಸನಿರ್ಬಂಧವಿಲ್ಲವೆಂದು ಕಂಠೋಕ್ತವಾಗಿ ಹೇಳಿದನು. ಈ ಱ ೞ ಗಳ ವಿಚಾರವು ಚರ್ವಿತ ಚರ್ವಣವೇ ಸರಿ. ಆದರೆ ಇಲ್ಲಿ ನಾನು ಚರ್ಚಿಸಲಿರುವ ವಿಷಯದ ಸ್ಪಷ್ಟತೆಗೆ ತಾವು ಆ ಅಕ್ಷರಗಳ ಉಚ್ಚಾರವನ್ನು ಸ್ಮರಣಕ್ಕೆ ತಂದುಕೊಂಡರೆ ಒಳ್ಳೆಯದೆಂದು ತಿಳಿದು ಅದನ್ನು ಮತ್ತೆ ಹೇಳಿದೆನು. ನಾನು ಹೇಳುವ ವಿಷಯವೇನೆಂದರೆ, ಈ ಅಕ್ಷರಗಳನ್ನು ಬದುಕಿಸುವ ಪ್ರಯತ್ನವನ್ನು ಮಾಡಿದ ದರ್ಪಣಕಾರನೇ ತನಗೆ

ತಿಳಿಯದಂತೆ ತಾನೇ ಇವುಗಳ ಸಮಾಧಿಯನ್ನು ರಚಿಸಿದನೆಂದು ಹೇಳಬಹುದು. ಹೇಗೆಂದರೆ—

**" ಇವು ವರ್ಣಾವೃತ್ತಿಗೆ ಸಲ್ವುವು, ಸಂದುಂ ಪ್ರಾಸದೆಡೆಗೆ ಸಲ್ಲವು. "**

—ದ. ಸೂ. ೧೯

ಈ ರಕಾರಗಳ ವರ್ಣಾವೃತ್ತಿಯನ್ನು ಎಂದರೆ ಅನುಪ್ರಾಸವನ್ನು ಒಪ್ಪಿದನು. ಮತ್ತು ಅನುಪ್ರಾಸಕ್ಕೆ ಸಂದರೂ ಮುಖ್ಯಪ್ರಾಸಕ್ಕೆ ಸಲ್ಲವು ಎಂದು ಹೇಳಿದನು. ಆದರೆ ಇದಕ್ಕೆ ವಿರುದ್ಧವಾಗಿ " ಮುಖ್ಯ ಪ್ರಾಸಕ್ಕೆ ಸಂದರೂ ಅನುಪ್ರಾಸಕ್ಕೆ ಸಲ್ಲವು " " ಇವು ಪ್ರಾಸದೆಡೆಗೆ ಸಂದುಂ ವರ್ಣಾವೃತ್ತಿಗೆ ಸಲ್ಲವು. " ಎಂದು ಹೇಳಬೇಕಾಗಿತ್ತು. ಏಕೆಂದರೆ, ಕನ್ನಡದ ಮುಖ್ಯ ಪ್ರಾಸವೆಂಬದು ಬರಿಯ ಸಂಕೇತ. ಅದನ್ನು ಪ್ರಾಚೀನ ಕವಿಗಳು ನಿರ್ಬಂಧವಾಗಿ ಏಕೆ ಇಟ್ಟುಕೊಂಡರೆಂಬದನ್ನು ವಿವೇಚಿಸುವದು ಈಗ ಅಪ್ರಸ್ತುತ. ಆದರೆ ಮುಖ್ಯ ಪ್ರಾಸಸ್ಥಾನದಲ್ಲಿ ವ್ಯಂಜನಸಮತೆಯನ್ನು ಕಾದುಕೊಳ್ಳುವದರಿಂದ 'ಕಾವ್ಯದಿಂದ ದೊರೆಯುವ' ಆನಂದಕ್ಕೆ ಈ ಮುಖ್ಯ ಪ್ರಾಸವು ಏನೂ ಸಹಾಯಕಾರಿಯಲ್ಲವೆಂಬದು ಖಂಡಿತ. ಕೆಲವು ಅಕ್ಷರವೃತ್ತಗಳಲ್ಲಿ ೨೦–೨೨ ಅಕ್ಷರಗಳ ಅಂತರದಿಂದ, ಕೆಲ ಮಾತ್ರಾವೃತ್ತಗಳಲ್ಲಿ ೨೦–೨೪ ಮಾತ್ರೆಗಳ ಅಂತರದಿಂದ ಬರಬಹುದಾದ ಈ ಅಕ್ಷರಸಮತೆಯು ದೀರ್ಘಾವಧಿಕವಾಗುವದರಿಂದ ಶ್ರೋತಾರನ ಅನುಸಂಧಾನಾಭಾವದಿಂದ ಅವನಿಗೆ ಒಂದೇ ಅಕ್ಷರವು ಪುನಃ ಪುನಃ ಆವೃತ್ತವಾಯಿತೆಂಬ ಅನುಪ್ರಾಸರೂಪ ಶಬ್ದಾಲಂಕಾರದ ಕಲ್ಪನೆ ಬರುವದು ಅಸಂಭವವೇ; ಎಂದಬಳಿಕ ಅನುಪ್ರಾಸದಿಂದ ಬರಬಹುದಾದ ಆನಂದವಾದರೂ ಅವನಿಗೆ ಉಂಟಾಗುವದು ಸಂಭವನೀಯವಲ್ಲ. ಹೀಗಿರಲು ಮುಖ್ಯಪ್ರಾಸವು ಅನುಪ್ರಾಸವೆನಿಸಲಾರದಾದ್ದರಿಂದ ಪ್ರಾಸಸ್ಥಾನದ ಈ ಸಾಂಕೇತಿಕ ಅಕ್ಷರಸಮತೆಗಿಂತ ವರ್ಣಾವೃತ್ತಿಯಲ್ಲಿ — ಎಂದರೆ ಅನುಪ್ರಾಸದಲ್ಲಿ — ಅಕ್ಷರಸಮತೆ ಅವಶ್ಯಕ. ಒಂದು ವ್ಯಂಜನವು ಮೇಲೆ ಮೇಲೆ ಆವೃತ್ತವಾಗಿದ್ದರೆ ಅದು ಕರ್ಣಾನಂದವನ್ನುಂಟುಮಾಡುವದು. ಉದಾ:

**" ಅನಂಗರಂಗಪ್ರತಿಮಂ ತದಂಗಂ ಭಂಗೀಭಿರಂಗೀಕೃತಮಾನತಾಂಗ್ಯಾಃ " ೧.**
**" ಸಿಂಜಾನಮಂಜುಮಂಜೀರಗುಂಜನವೇಂ ಶ್ರವಣರಂಜನ ಮಾಯ್ತೋ " ೨.**

ಆದರೆ

**ಸುರಗಿಱಿದೊಱಗಿದ ಬಿರುದರ**
**ಕರುಳಂ ಕೊಱೆಕೊಱೆದು ಮರುಳಿರುಳ್ತಿಂಬೆಸೆಯೊಳ್**
(—ದ. ಸೂ. ೧೮. ಕವಿಪ್ರಯೋಗ)

ಇಲ್ಲಿಯು ಱ ರ ಕಾರಗಳ ಅನುಪ್ರಾಸವು ಅವುಗಳ ಉಚ್ಚಾರಣೆಯಲ್ಲಿ ಸ್ಪಷ್ಟವಾದ ಭಿನ್ನತೆ ಇರುವಾಗ—ಅವು ಭಿನ್ನ ಭಿನ್ನ ವರ್ಣಗಳೆಂದು ನಮ್ಮ ಅನುಭವಕ್ಕೆ ಬರುತ್ತಿರುವಾಗ—ವ್ಯಂಜನಗಳ ಅಸಮತೆಯು ಕಲ್ಪನೆ ಇರುವಾಗ — ವ್ಯಂಜನ ಸಮತೆ ಬಂತೆಂದು—ಎಂದರೆ ಅನುಪ್ರಾಸವಾಯಿತೆಂದು ನಾವು ಹೇಗೆ ಆನಂದವನ್ನು ಪಡೆಯೋಣ? ಱ ರ ಕಾರಗಳ ಉಚ್ಚಾರಣೆಯಲ್ಲಿಯ ಭೇದವನ್ನು ನಾವು ಮರೆಯುತ್ತ ಬಂದದ್ದೇ "ಇವು ವರ್ಣಾವೃತ್ತಿಗೆ ಸಲ್ಲುವವು" ಎಂಬ ವಿಧಾನಕ್ಕೆ ಕಾರಣವಾಯಿತು. ಇವುಗಳ ಉಚ್ಚಾರಣೆಯು ಸ್ಪಷ್ಟವಾದ ಭೇದವು ಕಣ್ಣಿದಿರಿಗೆ ಇದ್ದರೆ "ಇವು (ಪ್ರಾಸದೆಡೆಗೆ ಸಂದುವು) ವರ್ಣಾವೃತ್ತಿಗೆ ಸಲ್ಲವು" ಎಂದೇ ಕೇಶಿರಾಜನು ಹೇಳುತ್ತಿದ್ದನು. ಱ ರ ಕಾರಗಳ ಅನುಪ್ರಾಸವನ್ನು ಒಪ್ಪಿದಂತೆ ಡ ೞ ಕಾರಗಳ ಲ ಳ ಕಾರಗಳ ಅನುಪ್ರಾಸವನ್ನೂ ಕೇಶಿರಾಜನು ಒಪ್ಪಿದ್ದಾನೆ! (ದ. ಸೂ. ೧೯. ಏಕಸ್ಥಾನೀಯಂಗಳೆಂದು..* ಈ ವಿಭಿನ್ನ ಧ್ವನಿಗಳ ಅನುಪ್ರಾಸವು ಹೇಗೆ ಘಟಿಸುವದೋ ದೇವರೇ ಬಲ್ಲ! ಇವಲ್ಲದೆ

**ಹಿರಿಯರ್ ಸಲಿಪರ್ ದಡ್ಡ ।**
**ಕ್ಕರದ ಱಲಕ್ಕ್ಯದೆ ರೇಫೆವೆರಸಿದ ದಡ್ಡ ॥**
**ಕ್ಕರಮುಂ ಱೞನಾಗದನು**
**ಚ್ಚರಿಸಲ್ಕಾಗಿರ್ದತೆಱದಿನಂತದು ಶುದ್ಧಂ ॥ ದ. ಸೂ. ೨೪.**

[ —ೞ ಕಾರ ಸಂಯುಕ್ತಕ್ಕೆ ರೇಫಸಂಯುಕ್ತವನ್ನು ಪ್ರಾಸದಲ್ಲಿ ಉಪಯೋಗಿಸಬಹುದು. ಅಲ್ಲಿ ರೇಫ ಸಂಯುಕ್ತವನ್ನು ೞ ಸಂಯುಕ್ತವನ್ನಾಗಿಮಾಡಿ ಉಚ್ಚರಿಸಲಾಗದು. (ಉಚ್ಚರಿಸಲ್ಕೆ ಆಗ) ಇದ್ದ ತೆರದಲ್ಲಿಯೇ ಅದು ಶುದ್ಧ.]

ಎಂದರೆ ೞ ಕಾರ ಸಂಯುಕ್ತಾಕ್ಷರದ ಪ್ರಾಸದಲ್ಲಿ ರೇಫ ಸಂಯುಕ್ತಾಕ್ಷರವು ಬರಬಹುದು. ಉದಾ:

೧. **ಬೞ್ದುದು ಬಳ್ವಾಡಿ ನೆಱೆ ನಂ**
**ಬಿರ್ದದಾರುಹತಂ ಜಿನೇಂದ್ರನಂ....।**

೨. **ಚುರ್ಚಿದವ್ರೋಲ್ ಬಿಸಿಲಳುರೆ ಕಿ**
**ಮುೞ್ದಿದ ತೞಂತೆ.... (ಗುಣನಂದಿ ಪ್ರಯೋಗ)**

೩. **.......ದೇ**

---

* ಏಕಸ್ಥಾನೀಯತೆ ಅನುಪ್ರಾಸಕ್ಕೆ ಪ್ರಬಲ ಕಾರಣವಾಗಲಾರದು.

**ವರ್ಣಶಿಕ್ಷಾಡಿಯರ್ ಮಾಟ್ಸಿರ್**
**ಸೀಟ್ಕರಿಸಿದ ನಿಮ್ಮ ದೊರೆಗೆ ಬೋಳೆಯರೊಳರೇ ?**

ಮೇಲೆ ಬರೆದ ಸೂತ್ರವನ್ನು ರಚಿಸಿ ಹಿರಿಯರ ಪ್ರಯೋಗಗಳನ್ನು ಉದಾಹರಿಸಿ ಸಂಯುಕ್ತಾಕ್ಷರ ಪ್ರಾಸದಲ್ಲಿ ೞ ಕಾರಕ್ಕೆ ರೇಫವು ಸಲ್ಲುವದೆಂದು ವಿಧಾನ ಮಾಡಿದ್ದು ಅನುಚಿತವೆಂದು ತೋರುವದು. ಅನುಪ್ರಾಸಕ್ಕೆ ಇವು ಸಲ್ಲವು ಎಂದು ವಿಧಿಸಿದ್ದರೆ ಱ ರ ಕಾರಗಳ ಭಿನ್ನತೆಯು ಸ್ಪಷ್ಟವಾಗಿ ಜನಕ್ಕೆ ತಿಳಿಯುತ್ತಿತ್ತು. ಹಾಗಾದರೆ ಪ್ರಾಚೀನರ ಮೇಲೆಹೇಳಿದ ಪ್ರಯೋಗಗಳ ಗತಿ ಏನು ? ಎಂದರೆ ಅವು 'ಮಹಾಕವಿ ಪ್ರಯೋಗಗಳು' ಎಂದು ಹೇಳಬೇಕಾಗಿತ್ತು. ಅಂದರೆ ಆ ತರದ ಪ್ರಯೋಗವನ್ನು ಮುಂದಿನವರು ಮಾಡುತ್ತಿರಲಿಲ್ಲ. ಱ ರ ಕಾರಗಳು ಭಿನ್ನವೆಂಬ ಕಲ್ಪನೆ ಸರಿಯಾಗಿ ಉಳಿಯುತ್ತಿತ್ತು.

ಕಾಲಕ್ರಮದಲ್ಲಿ ಈ ಪ್ರಾಸನಿರ್ಬಂಧವು ಬಹಳಮಟ್ಟಿಗೆ ಶಿಥಿಲವಾಯಿತು.

ಈ ವಿಷಯವನ್ನು “ **ಡೋ ಬಹುಳಂ** ” ( ಶಾ. ಸೂ. ೧೪೦ ) ಈ ಶಾಸನ ಸೂತ್ರದ ವ್ಯಾಖ್ಯಾನದಲ್ಲಿ ನೋಡಬಹುದು. ಈ ಭಿನ್ನ ವ್ಯಂಜನಗಳ ಪ್ರಾಸವು “ ಮಹಾಕವಿಭಿಃ ನಿಃಶಂಕಂ ಪ್ರಯುಜ್ಯತೇ ” ಎಂದು ಶಾ ಕಾರನು ಹೇಳಿದನು.

ದರ್ಪಣಕಾರನ ಈ ವಿಧಾನದಿಂದ ಮುಂದಿನ ಕವಿಗಳಿಗೆ ಪ್ರಾಸದಲ್ಲಿ ಅಕ್ಷರಸಮತೆ ಪೂರ್ಣವಾಗಿ ಇಲ್ಲದಿದ್ದರೂ ನಡೆಯುವದೆಂಬ ಸೂಚನೆ ದೊರೆಯಿತು. ಅದರಿಂದ ೞ ಳ ಕಾರಗಳ ಪ್ರಾಸವು ಆರಂಭವಾಯಿತು. ಮುಂದೆ ವರ್ಗಪ್ರಾಸ ( ಕ ಖ ಗ ಘ ), ಸಮೀಪಪ್ರಾಸ ( ಶ ಷ ಸ ), ಲ ಳ ಪ್ರಾಸಗಳು, ಮುಂದೆ ಮುಂದೆ ಅದೂರ ಪ್ರಾಸ! ನಿಷ್ಪ್ರಾಸ! ಹೀಗೆ ಪ್ರಾಸದ ವಿಡಂಬನೆ ನಡೆದದ್ದು ಅಚ್ಚರಿಯಲ್ಲ. ಈ ಮೊದಲು ತೋರಿಸಿದ ಅನುಪ್ರಾಸವನ್ನೂ ಈಗ ತೋರಿಸಿದಂಥ ಪ್ರಾಸವನ್ನೂ- ವಿಧಿಸಿದ್ದೇ (ವ್ಯಾಕರಣ ವಿಧಾನವನ್ನು ಮಾಡಿದ್ದೇ )- ಆ ಅಕ್ಷರಗಳ ಸಮಾಧಿಗೆ ಕಾರಣವಾಯಿತೆಂದು ನಾನು ಹಿಂದೆ ಹೇಳಿದ್ದರ ಕಾರಣವು.

ಈ ಱ ೞ ಕಾರಗಳು ಎಲ್ಲಿಂದ ಬಂದವು ಎಂಬದೊಂದು ವಿಚಾರಣೀಯ ವಿಷಯವು ಇವು ದ್ರಾವಿಡಗಳೆಂದು ಸಾಮಾನ್ಯರ ಕಲ್ಪನೆ ಇದೆ. ಆದರೆ ಋಗ್ವೇದ ಪ್ರಾತಿಶಾಖ್ಯದಲ್ಲಿ ಱ ಕಾರವಿದೆಯಂತೆ. ಋಗ್ವೇದ ಪ್ರಥಮ ಋಚೆಯಲ್ಲಿ ' ಅಗ್ನಿಂ ಈೞೇ ' ಎಂದು ೞ ಕಾರವು ಕಾಣಬರುತ್ತದೆ. ಆದದರಿಂದ ಇವುಗಳ ಮೂಲವನ್ನು ಹೇಳುವದು ಸಂಶೋಧಕರ ಕೆಲಸವು.

ಅಕ್ಷರ ಪ್ರಕರಣವನ್ನು ಮುಗಿಸುವಾಗ ಕೆಲವು ಮಾತುಗಳನ್ನು ಕನ್ನಡಿಗರ ಗಮನಕ್ಕೆ ತಂದುಕೊಡುತ್ತೇನೆ. ಸಂಸ್ಕೃತದಲ್ಲಿ ಪಾಣಿನಿ ಶಿಕ್ಷಾಗ್ರಂಥವಿರುವಂತೆ ಕನ್ನಡದಲ್ಲಿ ಅಂಥ ಗ್ರಂಥವು ಇಲ್ಲ. ಶಿಕ್ಷಾಗ್ರಂಥವು ಉಚ್ಚಾರಣೆಗೆ ಸಂಬಂಧಪಟ್ಟದ್ದು. ಉಚ್ಚಾರಣೆಯ ಶುದ್ಧತೆಗಾಗಿ ನಿಯಮಗಳು ಕನ್ನಡಕ್ಕೂ ಬೇಕು.

೧. **ಅ ಕಾರದ ಉಚ್ಚಾರಣೆಯು**— ಅದು ಶಬ್ದಗಳ ಕೊನೆಯಲ್ಲಿದ್ದಾಗ ವಾಡಿಕೆಯಾಗಿ ವಿಸ್ತೃತವಾಗಿರುತ್ತದೆ. ಉದಾ ಬಂದ, ಹೋದ, ಮಾಡಿದ "ಇಂತೆಂದನಾಭೀಷ್ಮ" ಮುಂ. ಶಬ್ದಮಧ್ಯದಲ್ಲಿರುವ ಅಕಾರದ ಉಚ್ಚಾರಣೆ ಸಂಕುಚಿತವಾಗಿದೆ. ಈ ಸಂಕುಚಿತ ಉಚ್ಚಾರಣೆಯೊಂದೇ ಅ ಕಾರದ ಉಚ್ಚಾರಣೆಯೆಂದು ತಿಳಿದುಕೊಂಡವರು ಬರಹದಲ್ಲಿ—ರಾಮನಗೌಡಾ, ಬಸಪ್ಪಾ, ಅಲ್ಲಾ, ಬಂದಾ ಈ ತರದ ತಪ್ಪುಗಳನ್ನು ಮಾಡುತ್ತಾರೆ. ಆದದರಿಂದ 'ಅ' ಕಾರದ ಎರಡು ವಿಧದ ಉಚ್ಚಾರಣೆಗಳನ್ನು ಮೊದಲಿನಿಂದಲೇ ಗಮನಕ್ಕೆ ತಂದುಕೊಡಬೇಕು. ೨. **ಋ ೠ ಕಾರಗಳ ಉಚ್ಚಾರಣೆ** ಅನೇಕರಿಗೆ ಬರುವದಿಲ್ಲ. ಅವರು ಅವನ್ನು ರು ಲೃ ಗಳಂತೆ ಉಚ್ಚರಿಸುವರು. ೩. **ಜಿಹ್ವಾಮೂಲೀಯ** X ( ಉದಾ: ಪ್ರಾತಃಕಾಲ ) **ಉಪಧ್ಮಾನೀಯ** ※. ( ಉದಾ: ಪಯಃಪಾನ ) ಇವುಗಳ ಸರಿಯಾದ ಉಚ್ಚಾರಣೆ ೪. ಮಹಾಪ್ರಾಣಗಳ ಉಚ್ಚಾರಣೆ ೫. **ಸಾನುನಾಸಿಕ ಯಾವಲ ಘಟಿತ** ಶಬ್ದಗಳ ಉಚ್ಚಾರಣೆ ( ಇವುಗಳಿಗೆ ಬರಹದಲ್ಲಿ ಗುರುತೂ ಆವಶ್ಯಕ, ( ಮಯಣ, ಸಾವೆ, ಇಲ್ಲಣ ಹೀಗೆ ) ೬. ಱ ೞ ಗಳ ಉಚ್ಚಾರಣೆ ( ಹಳಗನ್ನಡ ಪರಿಚಯಕ್ಕಾಗಿ ) ೭. **ಹ್ಯ ಹ್ಲ ಹ್ವ** ಮತ್ತು **ಹ್ನ ಹ್ಣ** ಮುಂತಾದವುಗಳ ಉಚ್ಚಾರಣೆ, ೮. **ದ್ವಿತ್ವಾಕ್ಷರಗಳ ಬರಹ** — ಹೆಣ್ಣು ಎಂಬದನ್ನು ಹೆಂಣು ಎಂದು, ಮಣ್ಣು ಎಂಬದನ್ನು ಮಂಣು ಎಂದು ಬರೆಯುವದು ಅನುಚಿತ. ದ್ವಿತ್ವವನ್ನು ತೋರಿಸುವದಕ್ಕೆ ಹಿಂದೆ ಒಂದು ಚುಕ್ಕೆಯನ್ನು ಕೊಡುತ್ತಿದ್ದರೆಂದೂ ( ಉದಾ: ಹೆ·ಣು ) ಕಾಲಕ್ರಮದಲ್ಲಿ ಆ ಚುಕ್ಕೆ ಸೊನ್ನೆಯಾಯಿತೆಂದೂ ಲಿಪಿಸಂಶೋಧಕರು ಹೇಳಿದರು. ೧೫, ೧೬ ನೆಯ ಶತಮಾನಗಳ ಹಸ್ತಲಿಖಿತ ಗ್ರಂಥಗಳಲ್ಲಿಯೂ, ಈಚೆಗೆ ಮುದ್ರಿತವಾದ ದರ್ಪಣ ಶಾಸನಗಳಂಥ ಗ್ರಂಥಗಳಲ್ಲಿಯೂ ಈ ದೋಷವು ಕಾಣಬರುತ್ತದೆ. ಚುಕ್ಕೆ ಹೋಗಿ ಸೊನ್ನೆಯಾದದ್ದು ಅನುಚಿತವೆಂಬದನ್ನು ಬಗೆಯದ ಸಾಮಾನ್ಯರು ಈಗಲೂ ಈ ದ್ವಿತ್ವಾಕ್ಷರಗಳ ಬರಹದಲ್ಲಿ ಸೊನ್ನೆಯನ್ನು ಉಪಯೋಗಿಸುತ್ತಾರೆ. ಇದು ಕೇವಲ ಭಾಷೆಯ ಅಪಹಾಸ. ೯. **ಶಿಥಿಲ ದ್ವಿತ್ವ**ವಿದ್ದ ಅಗಲ್ಗಳ್ ಕನರ್ಗಳ್ ಕುಳಿರ್ಗಾಳಿ ಮುಂತಾದ ಶಬ್ದಗಳ ಉಚ್ಚಾರಣೆ

೧೦. **ನಿತ್ಯಶಿಥಿಲದ್ವಿತ್ವವಿದ್ದ** ಬರ್ದಿಲ ಎರ್ದೆ ಮುಂತಾದವುಗಳ ಉಚ್ಚರಣೆ. ಇವೇ ಮುಂತಾದ ಹಲವು ವಿಚಾರಗಳನ್ನು ಕನ್ನಡ ಶಿಕ್ಷಾಗ್ರಂಥವು ಒಳಗೊಳ್ಳಬೇಕು.

ಇನ್ನು ಅಕ್ಷರಗಳ ಒಟ್ಟು ಲೆಕ್ಕ ದರ್ಪಣಕಾರನ ಮತದಂತೆ ೬೫.

| | |
|---|---|
| ೭ ಸ್ವರಗಳು × ೩ ( ಹ್ರಸ್ವ ದೀರ್ಘ ಪ್ಲುತ ) | ೨೧ |
| ಐ ಔ × ೨ ( ದೀರ್ಘ, ಪ್ಲುತ ) | ೪ |
| ವರ್ಗೀಯ ವ್ಯಂಜನ | ೨೫ |
| ಅವರ್ಗೀಯ ವ್ಯಂಜನ | ೯ |
| ಱ ೞ | ೨ |
| ಅಯೋಗವಾಹ | ೪ |
| | ೬೫ |

ಶಾಸನಕಾರನ ಮತದಂತೆ — ೬೪; ಅವನು ೞ ಕಾರವು ಳ ಕಾರದ ಒಂದು ಭೇದವೆಂದು ಹೇಳಿ ಅದನ್ನು ಪ್ರತ್ಯೇಕವೆಂದು ಎಣಿಸಲಿಲ್ಲ.

ಈ ೬೫ ಅಕ್ಷರಗಳಲ್ಲದೆ ಇನ್ನೂ ಕೆಲವು ಅಕ್ಷರಗಳು ಇಲ್ಲವೆ ಅವುಗಳಿಗಾಗಿ ಗುರುತುಗಳು ನಮಗೆ ಬೇಕು. ಫಜಲ್ ಮುಂತಾದ ಮುಸಲ್ಮಾನಿ ಶಬ್ದಗಳಲ್ಲಿದ್ದ ಫ಼್ ಜ಼್ ಮುಂತಾದವು, ಆಫ್ ಬ್ಯಾಂಕ್ ಮುಂತಾದ ಇಂಗ್ಲಿಶ್ ಶಬ್ದಗಳಲ್ಲಿರುವ ಆ ತ ಮುಂತಾದವುಗಳಿಗಾಗಿ ನಿಶ್ಚಿತವಾದ ಗುರುತುಗಳು ಇವೆಲ್ಲ ನಮ್ಮ ಬರಹಕ್ಕೆ ಅವಶ್ಯವಾಗಿವೆ.

## ಅಲ್ಲ ಶಬ್ದದ ವಿಚಾರ

'ಇಲ್ಲ' ಶಬ್ದವು ಹಳೆಯದಿರಬಹುದು. 'ಅಲ್ಲ' ಶಬ್ದವು ಅಷ್ಟು ಹಳೆಯದೆಂದು ತೋರುವದಿಲ್ಲ. ಅಕ್ಷರಪ್ರಕರಣದಲ್ಲಿ ಕೇಶಿರಾಜನು ಅಲ್ಲದೆ ಎಂಬ ಶಬ್ದವನ್ನು ಉಲ್ಲೇಖಿಸಿ ಅದರ 'ದೆ' ಲೋಪವಾಗಬಹುದೆಂದು ಹೇಳುತ್ತಾನೆ. ಅದು ನಾವು ಈಗ ಉಪಯೋಗಿಸುತ್ತಿರುವ 'ಅಲ್ಲ' ಎಂಬುದು ಅಲ್ಲ. 'ಗೊರವನಲ್ಲದೆ ಪೊಗಳೆಂ' ಎಂಬುದನ್ನು 'ಗೊರವನಲ್ಲ ಪೊಗಳೆಂ' ಎಂದು ಹೇಳಬಹುದಂತೆ. ಈ 'ಅಲ್ಲ' ವು 'ಅಲ್ಲದೆ' ಯ ರೂಪಾಂತರವು. 'ಅಲ್ಲದೆ' ಗೆ ನಿರ್ಧಾರಣಾರ್ಥವೆಂದು ದರ್ಪಣಕಾರನು

**ಪುದಿಗುಂ ನಿರ್ಧಾರಣದ**
**ಲ್ಲದೆಯೆಂಬ ದೆಶಾರದೆಡೆಗೆ ಪಿರಿದುಂ ಲೋಪಂ ।** (ದ. ಸೂ. ೪೭)

ಎಂದು ಒಕ್ಕಣಿಸಿದ್ದಾನೆ.

'ಅಲ್ಲದೆ' ಎಂಬ ಇಡಿ ಶಬ್ದಕ್ಕೆ ನಿರ್ಧಾರಣಾರ್ಥವಲ್ಲವೆಂಬುದು ಸಹಜ. ಆ ಶಬ್ದವು 'ಅಲ್ಲದು' ಗೆ 'ಎ' ಸೇರಿ ಆಗಿರಬೇಕು. ಅಲ್ಲದು ಶಬ್ದವು 'ತದ್ಭಿನ್ನ' ಎಂಬ ಅರ್ಥದ್ದು. ಇದು ಒಳ್ಳಿತು . . . . ಇನಿದು ಕಡಿದು ಎಂಬ ಗುಣವಾಚಕ ಶಬ್ದಗಳಂತೆ ಇದೆ. ಇದರ ಬಹುವಚನ ರೂಪಗಳೂ ಇವೆ.

**ಕರಿಯಿವು ಕರಿಯುಲ್ಲವು ಗಿರಿ ।**
**ಗಿರಿಯುಲ್ಲವು ಕರಿ . . . .**
**ಅರಣ್ಯದೊಳಱಿಯಲಾಗ ಕರಿಯುಂ ಗಿರಿಯುಂ ।**

( ಶಬ್ದಸ್ಮೃತಿ ಸೂ. ೩೫. ರ ಪ್ರಯೋಗ )

ರನ್ನನ ಗದಾಯುದ್ಧ ಕಾವ್ಯದಲ್ಲಿ 'ಅಲ್ಲನ್' ಎಂಬ ಪ್ರಯೋಗವಿದೆ. "ನಿಮಗಾಂ ಮಗನಲ್ಲನೆ ?" ( ಅಲ್ಲನ್ + ಎ — ೧೦ನೆಯ ಆಶ್ವಾಸ ೮ ನೆಯ ಪದ್ಯ.) ಇನ್ನು 'ಅಲ್ಲದು' ತದ್ಭಿನ್ನಾರ್ಥಕವಾದರೆ 'ಅಲ್ಲದೆ' ಗೆ ತದ್ಭಿನ್ನ ನಿರ್ಧಾರಣೆ ಎಂಬ ಅರ್ಥ. ಗೊರವನಲ್ಲದೆ ಪೊಗಟೆಂ ಎಂದರೆ ಗೊರವ ಭಿನ್ನನನ್ನು ನಿರ್ಧಾರಿತವಾಗಿ ಹೊಗಳೆನು ಎಂಬ ಅರ್ಥ. ಆದರೆ ಇಡಿ 'ಅಲ್ಲದೆ' ಗೆ ನಿರ್ಧಾರಣಾರ್ಥವೆಂದು ಏಕೆ ಹೇಳಿದನೋ ತಿಳಿಯದು. ಇದೇ 'ಅಲ್ಲದೆ' ಶಬ್ದವನ್ನು ಮತ್ತೆ ೬೪ ನೆಯ ಸೂತ್ರದಲ್ಲಿ ಹಿಡಿದು

**ಅವಧಾರಣೆಯುನಿಯೋಗ**
**ವ್ಯವಹೃತಿಯಿಂದಿರೆ . . .**
**ತಗುಳ್ಚುವುದು ಸಂಹಿತೆಯುಂ ।** ದ. ೬೪. ಸೂ.

'ಅಲ್ಲದೆ' ಯ ಮುಂದೆ ಸ್ವರವು ಬರಲು ಪ್ರಕೃತಿಭಾವವಾಗದೆ ಸಂಧಿ ಯಾಗುವದೆಂದು ( ಪ್ರಕೃತಿ ಭಾವಕ್ಕೆ ಪ್ರತ್ಯಪವಾದವಾಗಿ ) ಹೇಳುತ್ತಾನೆ.

ಪ್ರಯೋಗ—ಮಾಮರನಲ್ಲದಿಲ್ಲ ( ತೋಂಟದಲ್ಲಿ ). ಇಲ್ಲಿಯೂ ಅಲ್ಲದು+ ಎ=ಅಲ್ಲದೆ ಆಗಿದೆಯೆಂದೇ ದರ್ಪಣದ ಮತವಿರಬೇಕು. ಆದರೆ ಇಲ್ಲಿ 'ಎ'

ಎಂಬದು ' ಅನಿಯೋಗವ್ಯವಹೃತಿ ' ಯಿಂದ ಇದೆ. ಎಂದರೆ ಅದು ತನ್ನ ನಿಯೋಗವನ್ನು—ತನ್ನ ಸೇವೆಯನ್ನು ( ಕಾರ್ಯವನ್ನು ) ಸಲ್ಲಿಸದೆ ಸುಮ್ಮನೆ ಬಂದಿದೆ. ಮಾಮರನಲ್ಲದೆ ಇಲ್ಲ ಎಂದರೆ ಮಾಮರ ಭಿನ್ನವಾದದ್ದು (ತೋಟದಲ್ಲಿ) ಇಲ್ಲ ಇಷ್ಟೇ ಅರ್ಥ. ಅಲ್ಲಿ ಮಾಮರ ಭಿನ್ನವಾದ ಜಾಲಿ ಬೇವು ಮುಂತಾದದ್ದು ಇಲ್ಲ ಎಂದು ಅರ್ಥ. ಗೊರವನಲ್ಲದೆ ಪೊಗಳೆಂ ಎಂದರೆ ಗೊರವ ಭಿನ್ನನನ್ನು ಹೊಗಳುವದೇ ಇಲ್ಲ ಎಂಬದಾಗಿ ' ನಿರ್ಧಾರಣೆ ' ತೋರುವಂತೆ ಇಲ್ಲಿ ತೋರುವದಿಲ್ಲ. ಹೀಗೆ ' ಅಲ್ಲದು ' ಮೂಲವನ್ನು ಹಿಡಿದು ಅದಕ್ಕೆ ' ಎ ' ನಿರ್ಧಾರಣೆ ( ಅವಧಾರಣೆ ಎಂಬ ಅರ್ಥದ್ದು ) ಸೇರಿದೆಯೆಂದು ದರ್ಪಣಕಾರನ ವಿಚಾರವೆಂದು ತಿಳಿದುಬರುತ್ತದೆ. ಈ ' ಅಲ್ಲದು ' ಶಬ್ದಕ್ಕೆ ' ಅಲ್ತು ' ಎಂಬ ರೂಪಾಂತರವುಂಟೆಂದೂ ಈ ' ಅಲ್ಲದು ' ವಿನ ' ದು ' ಲೋಪವಾಡಿ ' ಅಲ್ಲ ' ಎನ್ನಬಾರದೆಂದೂ ದರ್ಪಣಕಾರನು ಸ್ಪಷ್ಟವಾಗಿ ಹೇಳಿದ್ದಾನೆ ' ಅಲ್ಲದುವೆಂಬ ' ಪ್ರತಿಷೇಧಮೊಳ್ ದು ಕಾರಕ್ಕೆ ಲೋಪನಾಗಲ್ಲೆನಲಾಗದು ' — ಲೋಪಂ ಆಗೆ ಅಲ್ಲ ಎನಲಾಗದು— ದ. ಸೂ. ೪೭ ರ ವೃತ್ತಿ. ' ಅಲ್ಲದು ' ರೂಪಾಂತರವಾಗಿ ಅಲ್ತು ಆಗುವಾಗ ಅದು ತನ್ನ ಮೂಲಾರ್ಥವನ್ನು ( ತದ್ಭಿನ್ನ ) ಬಿಟ್ಟು ಕ್ರಿಯಾನಿಷೇಧಾರ್ಥವನ್ನು ಹೊಂದಿದ್ದನ್ನು ನಾವು ಗಮನಿಸಬೇಕು. ' ಮಾಮರನಲ್ಲದಿಲ್ಲ ' ಎಂಬಲ್ಲಿ ಇರುವ ' ಅಲ್ಲದು ' ವಿನ ಅರ್ಥ, ಅದಕ್ಕೆ ಪ್ರತಿಯಾಗಿ ಬಂದದ್ದೆಂದು ದರ್ಪಣಕಾರನು ಹೇಳುವ 'ಅಲ್ತು' ವಿನ ಅರ್ಥ ಒಂದೇ ಅಲ್ಲ. ಅಲ್ಲದು = ತದ್ಭಿನ್ನ; ಅಲ್ತು = ಕ್ರಿಯಾಪ್ರತಿಷೇಧ. ಇನ್ನು ' ಅಲ್ಲದು ' ವಿನ ದುಲೋಪವಾಗಿ ' ಅಲ್ಲ ' ಎಂದಾಗಬಾರದೆಂದು ಎಚ್ಚರಗೊಂಡರೂ ' ಅಲ್ಲ ' ಎಂಬದು ಪ್ರಯೋಗಮಾರ್ಗದಲ್ಲಿ ಬಂದಿರಬೇಕು. ಇಲ್ಲ ಎಂಬದು ಅತ್ಯಂತಾಭಾವಾರ್ಥಕವಾದದ್ದು ಇರುವಂತೆ ಅನ್ಯೋನ್ಯಾಭಾವಾರ್ಥಕವಾದ ಅಲ್ಲ ಎಂಬದು ' ಅಲ್ಲದು ' ವಿನ ರೂಪಾಂತರವಾಗದೆ ಸ್ವತಂತ್ರವಾಗಿಯೂ ಇರಬಹುದು. ಇನ್ನು ಇಡಿ ' ಅಲ್ಲದೆ ' ಗೆ ನಿರ್ಧಾರಣೆ ಇಲ್ಲವೆ ಅವಧಾರಣೆ ಅರ್ಥವೆಂದು ಹೇಳಿದ್ದು ' ತಾನೆ ಲಾಕ್ಷಣಿಕಂ ' ಎಂದು ಹೇಳಿಸಿಕೊಂಡ ದರ್ಪಣಕಾರನಿಗೆ ಹೇಗೆ ಯೋಗ್ಯವೆಂಬದು ವಿಚಾರಣೀಯವಾಗಿದೆ. ( ಅಲ್ಲದು + ಎ – ' ಅಲ್ಲದೆ ' ಗೆ ತದ್ಭಿನ್ನ ಅವಧಾರಣೆ ಎಂದೇ ಅರ್ಥ. ) ' ನಿರ್ಧಾರಣೆ ' ಶಬ್ದವು ಜಾತಿಗುಣಕ್ರಿಯೆಗಳಿಂದ ಸಮುದಾಯದಿಂದ ಒಂದನ್ನು ಪೃಥಕ್ಕರಿಸುವದು ( ಪಕ್ಷಿಗಳೊಳ್ ಗಿಳಿ ಸುಂದರಂ ಎಂಬ ಅರ್ಥವು ವೈಯಾಕರಣಮಾರ್ಗದಲ್ಲಿ ರೂಢವಾಗಿದ್ದರೂ ತಾನೇ ಕಾರಕ ಪ್ರಕರಣದಲ್ಲಿ 'ನಿರ್ಧಾರಣೆ'ಗೆ ಈ ಅರ್ಥವನ್ನೇ ಹೇಳಿದ್ದರೂ ಅವಧಾರಣಾರ್ಥದಲ್ಲಿ

ನಿರ್ಧಾರಣೆ'ಯನ್ನು ಪ್ರಯೋಗಿಸಿ ಏಕೆ ತೊಂದರೆಯನ್ನುಂಟುಮಾಡಿದನೋ ? 'ತಲ್ಲದೆ'ಗೆ ತದ್ಭಿನ್ನ ಎಂಬ ಅರ್ಥವು

**" ತನ್ನ ಕೇಡಂ ಬಗೆವನಲ್ಲದೆ ಸುಖಮಂ ಬಗೆಯಂ "**

—ನಯಸೇನನ ಧರ್ಮಾಮೃತ, ೨ನೆಯ ಆಶ್ವಾಸ-೫೫

ಮುಂತಾದ ಪ್ರಯೋಗಗಳಲ್ಲಿಯೂ ಕಾಣಬರುವದು. ( ದರ್ಪಣದ ಈ ಎರಡು ಸೂತ್ರಗಳಿಗೆ ( ೪೭, ೬೪ ) ಅರ್ಥಮಾಡುವದು ಬಹಳ ತೊಂದರೆಯದೆಂದು ತೋರುತ್ತದೆ )

ಈ ವರೆಗಿನ ವಿಚಾರಗಳೆಲ್ಲ ದರ್ಪಣದ ಅಕ್ಷರಪ್ರಕರಣಕ್ಕೆ ಸಂಬಂಧಿಸಿವೆ. ಇನ್ನು ಸಂಧಿ ಪ್ರಕರಣಕ್ಕೆ ಸಾಗುವ.

## ಸಂಧಿ

**ಸಂಧಿಯು ಶ್ರುತಿಸಹ್ಯ**ವಾಗಬೇಕೆಂಬುದು ಕನ್ನಡದ ವೈಶಿಷ್ಟ್ಯಗಳಲ್ಲೊಂದಾಗಿದೆ. ಶ್ರುತಿಕಟು ಸಂಧಿಯು ಯಾವ ಭಾಷೆಯಲ್ಲಿಯೂ ದೋಷವೇ. "ಗಮಕ ಸಮಾಸದಿಂ ರಳ ಕುಳ ಕ್ಷಳದಿಂ ಶ್ರುತಿಸಹ್ಯ ಸಂಧಿಯಿಂ . . . . . . . " ಎಂದು ಕನ್ನಡದ ವೈಶಿಷ್ಟ್ಯಗಳನ್ನು ಹೇಳಿದ್ದನ್ನು ನೆನಪಿಗೆ ತಂದುಕೊಳ್ಳಬಹುದು. ಈ ಶ್ರುತಿಸಹ್ಯ ಸಂಧಿವಿಚಾರವನ್ನು ಅನುಲಕ್ಷಿಸಿ ದರ್ಪಣಕಾರನು—

**ಪರಪದಪೂರ್ವಂ ದ್ವಿತ್ವಾ**
**ಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾ ।**
**ಕ್ಷರಮಾಗೆ ಸಂಧಿ ದೋಷಂ**
**ಪರೇಫಮಿದಿಂಗೆ ಶಿಥಿಲಮೆಂದನುಕಂಪರ್ ॥** ದ. ಸೂ. ೫೯.

ಎಂಬ ಸೂತ್ರದಲ್ಲಿ ಒಂದು ಶ್ರುತಿಕಟುಸಂಧಿಯನ್ನು ನಿಷೇಧಿಸಿದ್ದಾನೆ. ಪೂರ್ವಪದ ಪರಪದ ಎಂದು ಹೇಳಿದ್ದರೂ ಇದು ಕೇವಲ ಸಮಾಸ ವಿಷಯವಲ್ಲ, ಪದಾಂತಸಂಧಿ ಮಾತ್ರ; ವೈಕಲ್ಪಿಕ. ಪೂರ್ವಶಬ್ದದ ಕೊನೆಯ ಅಕ್ಷರವು ಲಘುವಾಗಿದ್ದು ಪರಶಬ್ದದ ಆದ್ಯಕ್ಷರವು ಸಂಯುಕ್ತಾಕ್ಷರವಿದ್ದಲ್ಲಿ ಸಂಧಿಯನ್ನು ಮಾಡಬೇಕೇ ಬಿಡಬೇಕೇ ? ಉದಾ: ಇದು + ಸ್ವಾದು, ಎನ್ನ + ವ್ಯವಸಾಯಂ. ಈ ಸ್ಥಳಗಳಲ್ಲಿ ಸಂಧಿಮಾಡಿದರೆ ಅದು ಶ್ರುತಿಸಹ್ಯವಾಗುವದಿಲ್ಲವೆಂದು ದರ್ಪಣಕಾರನ ಮತ. ಲೋಪಾಗಮಾದೇಶರೂಪಸಂಧಿಕಾರ್ಯವಾಗು

ವವೇ ಸಂಧಿ ಎಂದು ತಿಳಿಯುದೆ " ಪರಃ ಸನ್ನಿಕರ್ಷಃ ಸಂಹಿತಾ," "ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವಂದನುದು ಸಂಧಿ ( ದ. ಸೂ. ೪೯ ) ಎಂಬಂತೆ ಅವ್ಯವಹಿತೋಚ್ಚರಣೆಯೆಲ್ಲ ಸಂಧಿಯೆಂದು ತಿಳಿಯಬೇಕು. ಪರ ಪದದ ಆದ್ಯಕ್ಷರವು ಸಂಯುಕ್ತವಾದದ್ದಿರಬೇಕಾದರೆ ಪರಪದವು ಸಂಸ್ಕೃತದ್ದಾಗಿರಬೇಕು. ಕನ್ನಡದಲ್ಲಿ ಸಂಯುಕ್ತಾಕ್ಷರವು ಆದಿಯಾದ ಶಬ್ದಗಳು ಸಿಕ್ಕುವದಿಲ್ಲ. ಮೇಲೆ ತೋರಿಸಿದ ಉದಾಹರಣಗಳಲ್ಲಿ ಸಂಧಿಮಾಡಿದರೆ — ಎಂದರೆ ಕೂಡಿಸಿ ಉಚ್ಚರಿಸಿದರೆ ಇದು ಸ್ವಾದು ಎನ್ನ ವ್ಯವಸಾಯಂ ಎಂದು ಆಗಿ ಆ ಉಚ್ಚರಣೆ ಶ್ರುತಿಕಟುವಾಗುವದು. ಇಂಥಲ್ಲಿ ಪರಶಬ್ದದ ಆದಿವ್ಯಂಜನಕ್ಕೆ ದ್ವಿತ್ವವೂ ಬರುವದುಂಟು. ಸಂಸ್ಕೃತದಲ್ಲಿ ಸುಧೀ+ಉಪಾಸ್ಯಃ ಎಂದಿರುವಾಗ **ಈ** ಕಾರಕ್ಕೆ ಯಕಾರಾದೇಶವಾಗುವದಷ್ಟೇ. ( ಯಣ್ ಸಂಧಿ ) ಸುಧ್ ಯ್ ಉಪಾಸ್ಯಃ ಎಂದು ಇರುವಾಗ **ಅನಚಿ ಚ** ( ಪಾಣಿನಿ ೮-೪-೪೭ ) ಎಂಬ ಸೂತ್ರದಿಂದ ಸುಧ್‌ಧ್‌ಯ್+ಉಪಾಸ್ಯಃ ಆಗಿ ಬಳಿಕ **ಝಲಾಂಜಶ್‌ಝಶಿ** ( ಪಾಣಿನಿ ೮-೪-೫೩ ) ಈ ಸೂತ್ರದಿಂದ ಧ ಕಾರವು ದ ಕಾರವಾಗಲು ಸುದ್ಧ್ಯುಪಾಸ್ಯಃ ಎಂದಾಗುವಂತೆ ಇಲ್ಲಿಯೂ ಇದು ಸ್ವ್ವಾದು, ಎನ್ನ ವ್ವ್ಯವಸಾಯಂ ಎಂದಾಗುವದು. ಸುದ್ಧ್ಯುಪಾಸ್ಯ ಎಂಬದು ಸಂಸ್ಕೃತದವರಿಗೆ ಶ್ರುತಿಕಟುವಾಗುವದಿಲ್ಲವೇನೊ? ಆದರೆ ಇಂಥ ಸಂಧಿಯು ಕನ್ನಡದವರಿಗೆ ಶ್ರುತಿಕಟುವಾಗಿದೆ. ಇಂಥ ಸಂಧಿಯನ್ನು ಮಾಡಬಾರದೆಂದು ದರ್ಪಣಕಾರನು ಹೇಳಿದ್ದರೂ ಶಾಸನಕಾರನು " ಸ್ವರಾದರೋ ವ್ಯಂಜನೇ " ( ಶಾ. ಸೂ.೧.೬೭) ಎಂಬ ಸೂತ್ರದಿಂದ ಸ್ವರದ ಮುಂದಿರುವ ರೇಫ ಭಿನ್ನವ್ಯಂಜನಕ್ಕೆ ವ್ಯಂಜನವು ಪರವಾದರೆ ದ್ವಿತ್ವವಾಗುವದೆಂದು ಹೇಳಿ ದರ್ಪಣಕಾರನು ದೋಷಕ್ಕೆ ಉದಾಹರಿಸಿದ ಬರಿಸಿ + ಪ್ರಧಾನರಂ = ಬರಿಸಿಪ್ಪ್ರಧಾನರಂ ಇದುಸ್ವ್ವಾದು ಮುಂತಾದವನ್ನೇ ಉದಾಹರಿಸಿದ್ದಾನೆ. ದರ್ಪಣಕಾರನು—

> **ಬರಿಸಿ ಪ್ರಧಾನರಂ ಕು** (**ಬರಿಸಿಪ್ಪ್ರಧಾನರಂ ಮುಂತಾಗಿ ಇಲ್ಲಿ ಇರಬೇಕು.**)
> **ಳ್ಳಿರಿಸಿ ಪ್ರಿಯಕುಶಲವಾರ್ತೆಯಂ ನೆಱೆ ಕೇಳ್ದು |**
> **ಸ್ಥಿರವಿಂದುರ್ಪ್ರಭು ನುಡಿಯೆ**
> **ಪ್ರರೂಢಮುದನಾದನಾತನೆಂಬುದಮಾರ್ಗಂ ||**

( ದ. ಸೂ. ೫೯ ರ ಪ್ರಯೋಗ )

ಎಂದು ಇದು ದೋಷವೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ ಹಳೆಯ ಶಿಲಾಲಿಪಿಗಳಲ್ಲಿ ಶಾಸನಕಾರನು ವಿಧಿಸಿದಂತೆ ವ್ಯಂಜನ ದ್ವಿರ್ಭಾವವೇ ಕಂಡು

ಬರುತ್ತದೆಯಂತೆ. ಇದು ಸಂಸ್ಕೃತಾನುಸರಣವಿರಬಹುದು. ಇಲ್ಲಿ ದರ್ಪಣಕಾರನು ರೇಫಸಂಯುಕ್ತವು ಪರವಾದ ಪ್ರಯೋಗವನ್ನು ದೋಷಕ್ಕೆ ಉದಾಹರಿಸಿದ್ದು ಯುಕ್ತವಾಗಿಲ್ಲ; ಏಕೆಂದರೆ, ರೇಫಸಂಯುಕ್ತವು ಪರವಾದರೆ ಅಲ್ಲಿ ಶಿಥಿಲೋಚ್ಚಾರಣೆ ಇದ್ದರೆ ಅದು ದೋಷವಲ್ಲವೆಂದು [ "ಸರೇಫಮಿದಿರಾಗೆ ಶಿಥಿಲಮೆಂದನುಕರಿಪರ್" ] ಮುಂದೆಯೇ ಹೇಳಿದ್ದಾನೆ. ಇದು ಸ್ವಾದು ಎನ್ನ ವ್ಯವಸಾಯಂ ಮುಂತಾದವನ್ನು ಉದಾಹರಿಸಬೇಕಾಗಿತ್ತು. ಬರಿಸಿಪ್ರಧಾನರಂ ಎಂಬ ಪ್ರಯೋಗದಲ್ಲಿ ರೇಫಸಂಯುಕ್ತವು ಪರವಾಗಿದ್ದರೂ ಶಿಥಿಲೋಚ್ಚಾರಣೆ ಇಲ್ಲ. ಬರಿಸಿ*ಪ್ರಧಾನರಂ ಹೀಗೆ ಶಿಥಿಲೋಚ್ಚಾರಣೆ ಇದ್ದರೆ ಇದು ದೋಷವಾಗುತ್ತಿರಲಿಲ್ಲ. ಆದರೆ ಪದ್ಯವಾದದರಿಂದ 'ಸಿ' ಎಂಬದು ಗುರುವಾಗಬೇಕಾಗಿದೆ. ಶಿಥಿಲೋಚ್ಚಾರಣೆಯಾದರೆ ಛಂದೋದೋಷವು ಬರುವದು. ಇಂಥಲ್ಲಿ 'ಪ್ರಧಾನರಂ ಬರಿಸಿ' ಈ ರೀತಿ ಹೇಳಬೇಕೆಂದು ದರ್ಪಣಕಾರನ ಮತವು.

ಈ ಸಂಧಿದೋಷವನ್ನು ಪದ್ಯದಲ್ಲಿ ಮಾತ್ರ ಒಪ್ಪಬಹುದೆಂದು ಶಾಸನಕಾರನು ಹೇಳುತ್ತಾನೆ. ಆದರೆ ದರ್ಪಣಕಾರನು—

> **ಬಗೆಯುದೆ ಸತ್ಕಾವ್ಯವಹಾ**
> **ರಿಗಳ್‌ ಸಿರ್ವರ್ ಗದ್ಯಕಾವ್ಯದೊಳ್ ನಿರ್ಬಂಧಂ ।**
> **ಪುಗದೆಂದರೋಚಿಗಳದಂ**
> **ತೆಗಳ್ವೆಂದಾ ಗದ್ಯಪದ್ಯ ಕಾವ್ಯದೊಳಿಕ್ಕರ್ ॥ ದ. ಸೂ. ೬೦.**

ಇದು ಗದ್ಯಪದ್ಯಗಳೆರಡರಲ್ಲಿಯೂ ದೋಷವೆಂದೇ ಹೇಳಿದ್ದಾನೆ. ಇನ್ನು ಇದು ಪದಾಂತ ಸಂಧಿಯಾದದರಿಂದ ವೈಕಲ್ಪಿಕ. ಎನ್ನ . . . . ವ್ಯವಸಾಯಂ ಎಂದು ವಿಸಂಧಿ ಮಾಡಿದಾಗ ದೋಷವಿಲ್ಲವೆಂಬದು ನಿಜ. ಸಂಧಿಮಾಡಿದಾಗ—ಅವ್ಯವಹಿತವಾಗಿ ಉಚ್ಚರಿಸಿದಾಗ – ದೋಷವೆಂದೇ ದರ್ಪಣಕಾರನ ಮತ. ಅವನು ಈ ಸಂಧಿಯನ್ನು ಶ್ರುತಿಕಟು ಎಂದೇ ಹೇಳುವನು. ಒಟ್ಟಿಗೆ ಎನ್ನವ್ಯ್ಯವಸಾಯಂ ಬರಿಸಿಪ್ರ್ರಧಾನರಂ ಎಂಬ ಸಂಧಿಗಳು ಶ್ರುತಿಕಟುಗಳು. ಗದ್ಯವಾಕ್ಯದಲ್ಲಿ ಛಂದೋನಿರ್ಬಂಧಗಳಿಲ್ಲದ್ದರಿಂದ ಬರಿಸಿಪ್ರ್ರಧಾನರಂ ಎಂದು ಹೇಳುವದೇಕೆ? ಪ್ರಧಾನರಂ ಬರಿಸಿ ಎಂದು ಹೇಳಬಹುದಲ್ಲ? ಇದು ಸ್ಸ್ವಾದು ಏಕೆ? ಸ್ವಾದು ಇದು ಎನಬಹುದಲ್ಲವೇ? ಆದದರಿಂದ ಔಚಿತ್ಯವು (ಶ್ರುತಿಸಹ್ಯತೆ) ಸಾಧಿಸುವದರಿಂದ ದರ್ಪಣಕಾರನ ಮತವನ್ನು ಒಪ್ಪಬೇಕು. ಸಂಸ್ಕೃತಾನುಸರಣದಿಂದ ಬರಿಸಿಪ್ಪ್ರಧಾನರಂ, ಕುಪ್ಪು, ಸಜ್ಜಟ, ಕಣ್ಟಕ, ಸಮ್ಪಿಗೆ ಮುಂತಾದವು ಹಿಂದಿನ ಕಾಲದಲ್ಲಿ ಬಂದಿರಬಹುದೇನೋ?

ಇನ್ನು ರೇಫಸಂಯುಕ್ತಾಕ್ಷರವು ಪರವಾದಲ್ಲಿ **ಶಿಥಿಲೋಚ್ಚರಣೆ** ಮಾಡಬಹುದಾದದರಿಂದ ಅಲ್ಲಿ ಸಂಧಿಯಾಗಬಹುದೆಂದೂ ಅದು ಶ್ರುತಿಕಟುವಾಗುವದಿಲ್ಲವೆಂದೂ ದರ್ಪಣಕಾರನು **"ಸರೇಫಮಿಾದಿರಾಗೆ ಶಿಥಿಲಮೆಂದನು ಕರಿಪರ್"** ಎಂದು ಆಸಂಧಿಯನ್ನು ಒಪ್ಪಿ "ಪ್ರಣಯದೆ*ತ್ರಿಪಥಗೆ ನಡೆತರೆ* ತ್ರಿಣೇತ್ರನೊಲವಿಂದೆ ತಾಳ್ದಿದಂ ಮಸ್ತಕದೊಳ್" ಎಂದು ಉದಾಹರಿಸಿದ್ದಾನೆ.

ರೇಫಸಂಯುಕ್ತವು ಪರವಾದಾಗ ಶಿಥಿಲೋಚ್ಚರಣೆ ಸಂಸ್ಕೃತದಲ್ಲಿಯೂ ಕ್ವಚಿತ್ತಾಗಿ ಇತ್ತೆಂದು ತಿಳಿಯಬರುತ್ತದೆ. ವೃತ್ತರತ್ನಾಕರದಲ್ಲಿ ಕೇದಾರಭಟ್ಟನು—

*** ತರುಣಂ ಸರ್ಷಪಶಾಕಂ ನವೋದನಂ ಪಿಚ್ಛಿಲಾನಿಚ ದಧೀನಿ ।**
**ಅಲ್ಪವ್ಯಯೇನ ಸುಂದರಿ ಗ್ರಾಮ್ಯಜನೋ ಮಿಷ್ಟಮಶ್ನಾತಿ ॥**

( — ವೃತ್ತರತ್ನಾಕರೇ )

ಇಲ್ಲಿ 'ರಿ' ಎಂಬ ಅಕ್ಷರಕ್ಕೆ ಗುರುತ್ವವಿಲ್ಲವೆಂದು ಎಂದರೆ ಅಲ್ಲಿ ಶಿಥಿಲೋಚ್ಚರಣೆ ಇರುವದೆಂದು ತೋರಿಸಿದ್ದಾನೆ. ಅದೇ ಗ್ರಂಥದ ವ್ಯಾಖ್ಯಾನದಲ್ಲಿ

**"ಗೃಹೀತ ಪ್ರತ್ಯುದ್ಗಮನೀಯವಸ್ತ್ರಾ"**

( — ಕುಮಾರಸಂಭವ )

ಎಂಬ ಉದಾಹರಣವೂ ಇವೆ.

**ಯದಾತೀವ್ರಪ್ರಯತ್ನೇನ ಸಂಯೋಗಾದೇರಗೌರವಂ ।**
**ನಚ್ಛಂದೋಭಂಗಮಿತ್ಯಾಹುಸ್ತದಾ ದೋಷಾಯ ಸೂರಯಃ ॥**

( — ಸರಸ್ವತೀ ಕಂಠಾಭರಣ ಎಂಬ ಛಂದೋಗ್ರಂಥ. )

ರಾಮಾಯಣದ ಉದಾಹರಣ—

**ತಾನ್ಮೃತಾನಪಿ ಕ್ರವ್ಯಾದಾಃ ಕೃತಘ್ನಾನ್ನೋಪಭುಂಜತೇ ।**

ಇಂಥ ಶೈಥಿಲ್ಯದ ಉದಾಹರಣಗಳನ್ನೂ ಪ್ರಾಕೃತಭಾಷೆಯ ಉದಾಹರಣಗಳನ್ನೂ ವೃತ್ತರತ್ನಾಕರ ಟೀಕಾಕಾರನು ಕೊಟ್ಟಿದ್ದಾನೆ. ಸಂಸ್ಕೃತ ಪ್ರಾಕೃತಗಳಿಂದ ದೇಶಭಾಷೆಗಳಿಗೂ ಈ ಶೈಥಿಲ್ಯವು ಬಂದಿರಬೇಕು. ಆದರೆ

**ಬಂದು ದ್ವಾರಕೆಗಾಗ ತಾ ಗೋ । ವಿಂದ**

ಹೀಗೆ ರೇಫೇತರ ಸಂಯುಕ್ತಗಳು ಪರವಾದಾಗಲೂ ಶೈಥಿಲ್ಯವನ್ನು ಮಾಡುವ ರೂಢಿಯು ನಡುಗನ್ನಡಕಾಲದಲ್ಲಿ ಉಂಟಾದಂತೆ ತೋರುತ್ತದೆ. ಅಲ್ಲಿ ಸಂಯುಕ್ತಾಕ್ಷರದ ಹಿಂದಿನ ಲಘುವಿಗೆ ಗುರುತ್ವವು ಬಾರದಂತೆ ಉಚ್ಚರಿಸಬೇಕಾಗುವದು. ಈ ಶೈಥಿಲ್ಯವು ಶಾಸ್ತ್ರೀಯವಲ್ಲ. ಸಮ್ಮ ಶೈಥಿಲ್ಯವು! ಇದನ್ನು ಪ್ರಾಚೀನಲಾಕ್ಷಣಿಕರು ಒಪ್ಪುವದಿಲ್ಲ.

ಇನ್ನೊಂದು ವಿಚಾರವನ್ನು ಹೇಳಿ ಸಂಧಿ ಪ್ರಕರಣವನ್ನು ಮುಗಿಸುತ್ತೇನೆ.

**“ ..........................ಕಃ**
**ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂಜಿ³ಗೊಟ್ಟಂ”**

ಈ ಪ್ರಯೋಗದಲ್ಲಿ—

**“ ಕಃ ಕೇನಾರ್ಥೀ.........ದರಿದ್ರಃ ”**

ಇದು ವಾಕ್ಯಾನುಕರಣ ಇಲ್ಲವೆ ವಾಕ್ಯಾವತರಣ. ವಾಕ್ಯಾವತರಣದಲ್ಲಿ ಸಂಧಿ ವಿಕಲ್ಪವೆಂದು ದರ್ಪಣಕಾರನು ಹೇಳಿದ್ದಾನೆ. ( ದ. ಸೂ. ೬೧ ) ಆದರೆ ಮೇಲೆ ತೋರಿಸಿದ ವಾಕ್ಯಾವತರಣವನ್ನು “ . . ದರಿದ್ರ ಎನುತುಂ ಎಂಬದಾಗಿ ಉದಾಹರಿಸಿದ್ದಾನೆ. ಅಂದರೆ ಅಲ್ಲಿ ದರಿದ್ರಃ ಎಂಬುದರ ಮುಂದಿನ ವಿಸರ್ಗಲೋಪವಾದ ಬಳಿಕ ಅದಕ್ಕೆ ಎನುತುಂ ಎಂಬದು ಪರವಾಗಲು ವಿಸಂಧಿಯಾಗಿದೆಯೆಂಬದಕ್ಕೆ ( ದರಿದ್ರೆನುತಂ ಎಂದು ಸಂಧಿ ಆಗಲಿಲ್ಲ. ) ಉದಾಹರಿಸಿದ್ದಾನೆ. ಆದರೆ ವಿಸರ್ಗಲೋಪದ ವಿಧಾನವನ್ನು ಹೇಳಲಿಲ್ಲ. ಇದನ್ನು ಶಾಸನಕಾರನು ವ್ಯವಸ್ಥೆಗೊಳಿಸಿದ್ದಾನೆ.

**ಲುಬನವ್ಯಯಾನುಕರಣಸ್ಯ ವಿಸರ್ಗಸ್ಯ । ( ಶಾ. ಸೂ. ೧. ೮೩ )**

ಈ ಸೂತ್ರದಲ್ಲಿ ಆತನು ವಿಸರ್ಗಲೋಪವನ್ನು ಹೇಳಿದ್ದಾನೆ. “**ಅನುಕರಣಂ**” ( ಶಾ. ಸೂ. ೧. ೫೧ ) ಈ ಸೂತ್ರದಿಂದ ಅನುಕರಣ ( ಅವತರಣ ) ಗಳ ಸಂಧಿಯನ್ನು ವ್ಯವಸ್ಥಿತವಾಗಿ ಹೇಳಿದ್ದಾನೆ. ಇಂಥ ಸ್ಥಳಗಳಲ್ಲಿ ದರ್ಪಣದ ವಿಧಾನಗಳನ್ನು ಸ್ಪಷ್ಟಪಡಿಸಲು ಸಾಧ್ಯವಾಗುವದಿಲ್ಲ.

ಇನ್ನು ನಾನು ದರ್ಪಣದ ಪರಿಪಾಡಿಯಂತೆ **ನಾಮಪ್ರಕರಣಕ್ಕೆ** ಸಾಗುವೆನು. ಆರಂಭದಲ್ಲಿ ನಾಮದ — ಎಂದರೆ ಪ್ರಾತಿಪದಿಕದ ಇಲ್ಲವೆ ದರ್ಪಣ

ಶಾಸನಕಾರರ ರೂಢಿಯಂತೆ 'ಲಿಂಗ' ದ ವ್ಯಾಖ್ಯೆ ಬರುವದು. ಲಿಂಗ ಶಬ್ದವು ಪುಂಸ್ತ್ವ ಸ್ತ್ರೀತ್ವ ನಪ್ತ್ವ ವ್ಯಂಜಕ ಶಬ್ದಗತ ಧರ್ಮವಿಶೇಷ ಎಂಬ ಅರ್ಥವು ರೂಢವಾಗಿದ್ದರೂ ದರ್ಪಣಶಾಸನಕಾರರು 'ಪ್ರಾತಿಪದಿಕ'ಕ್ಕೆ ಲಿಂಗ ಶಬ್ದ ವನ್ನು ರೂಢವಾಡಿದರು. ದರ್ಪಣಕಾರನು—

**ಕ್ರಿಯೆಯಂ ನುಡಿಯದುದು ವಿಭ**
**ಕ್ತಿಯುಮಿಲ್ಲದುದರ್ಥಮುಳ್ಳುದಂತದು ಲಿಂಗಂ। ದ. ಸೂ. ೭೨**

ಎಂದು ಲಿಂಗವ್ಯಾಖ್ಯೆಯನ್ನು ಸೂತ್ರಿಸಿದನು.

ಶಾಸನಕಾರನು "**ಅರ್ಥವಲ್ಲಿಂಗಂ**" (ಶಾ. ಸೂ. ೧. ೮) ಎಂಬ ಸೂತ್ರ ದಿಂದ ಅರ್ಥವುಳ್ಳ ಶಬ್ದರೂಪವು ಲಿಂಗವೆಂದು ಹೇಳಿ ಪ್ರಾತಿಪದಿಕಾರ್ಥದಲ್ಲಿ ಲಿಂಗ ಶಬ್ದವನ್ನೇ ಬಳಸಿದನು. ಈ ಶಬ್ದವನ್ನು ಕನ್ನಡದಲ್ಲಿ ನಾಗವರ್ಮನೇ ಬಳಕೆಗೆ ತಂದನೆಂದು ತೋರುತ್ತದೆ. ಆತನು ತನ್ನ ಅರ್ಥವದಕ್ರಿಯಾವಾಚಿ ಕೃದಂತಂ ಚ ಲಿಂಗಂ (ಭಾ. ಸೂ. ૩೮) ಎಂಬ ಸೂತ್ರದಲ್ಲಿ ಲಿಂಗ ಶಬ್ದವನ್ನು ಹೇಳಿದನು. ಶಾಸನಕಾರನು ಲಿಂಗ ಶಬ್ದಕ್ಕೆ "ಲೀನಂ ಅರ್ಥಂ ಗಮಯತೀತಿ ಲಿಂಗಂ" (ತನ್ನಲ್ಲಿದ್ದ ಅರ್ಥವನ್ನು ತೋರಿಸುವದರಿಂದ ಲಿಂಗವು) ಎಂಬ ವ್ಯುತ್ಪತ್ತಿ ಯನ್ನು ಹೇಳಿದನು. ಲಿಂಗ ಶಬ್ದವು ಪ್ರಾತಿಪದಿಕಾರ್ಥದಲ್ಲಿ ಶಾಕಟಾಯನಾದಿ ಜೈನವ್ಯಾಕರಣಗಳಲ್ಲಿ ಪ್ರಯುಕ್ತವಾಗಿದೆಯೋ ನೋಡಬೇಕು. ಆದರೆ ಇದರಿಂದ ಇವರ ವ್ಯಾಕರಣಗಳಲ್ಲಿ ಪುಂಸ್ತ್ವಾದಿ ವ್ಯಂಜಕಧರ್ಮ ಎಂಬ ಅರ್ಥದಲ್ಲಿ ರೂಢವಾದ ಲಿಂಗ ಶಬ್ದ, ಮತ್ತು ಪ್ರಾತಿಪದಿಕಾರ್ಥದ ಲಿಂಗ ಶಬ್ದ ಹೀಗೆ ಎರಡು ಲಿಂಗ ಶಬ್ದಗಳುಂಟಾಗಿ ತೊಂದರೆ ಸಂಭವಿಸಿತು. ದರ್ಪಣಕಾರನು—

**ನೀನಜು ಕರ್ನಾಟಕದೊ।**
**ಳ್ಪೀನಂ ಸ್ತ್ರೀ ಪುಂ ನಪುಂಸಕೋಭಯು ಪುಂ ಸ್ತ್ರೀ॥**
**ಸ್ತ್ರೀನಪ್ ಸಮಸ್ತ ವಾಚ್ಯಾ।**
**ನ್ಯೂನಾವ್ಯಯಮೆಂದು ಲಿಂಗವೊಂಬತ್ತು ತೆಱಂ। ದ. ಸೂ. ೮೦**

ಈ ಸೂತ್ರದಲ್ಲಿ ಸ್ತ್ರೀ ವಾಚಕ ಪುಂ ವಾಚಕ ಮುಂತಾಗಿ ಒಂಬತ್ತು ಲಿಂಗ (ಪ್ರಾತಿಪದಿಕ) ಗಳನ್ನು ಹೇಳಿದನು. ಅವನು ಹೇಳುವ ಅವ್ಯಯ ಲಿಂಗದ ನಿರೂಪಣೆಯನ್ನು ನೋಡಿರಿ—

**ದೊರೆವಡೆದವ್ಯಯಲಿಂಗಂ**
**ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ ।**
**ಸರಿ ವಚನತ್ರಿತಯಕ್ಕಂ**
**ಸರಿಯೆನಿಸಿ ವಿಕಾರಮಿಲ್ಲದರ್ಥಮನೀಗುಂ ॥ ದ. ಸೂ. ೯೦**

ಎಂಬ ಸೂತ್ರಕ್ಕೆ ಉದಾಹರಿಸುವಾಗ ಚಚ್ಚರಂ ನುಡಿದಂ ಎಂಬಲ್ಲಿ ಚಚ್ಚರಮುಂ ನುಡಿವಂ ಎಂದು ದ್ವಿತೀಯೆಯನ್ನೂ ಪಚ್ಚನೆ ಕೆಚ್ಚನೆ ಬಗೆಯಂ ಎಂಬಲ್ಲಿ ಚತುರ್ಥಿಯನ್ನೂ ಕಲ್ಪಿಸಬೇಕೆಂದು ಹೇಳಿ, ಮಿಗೆ ಬಳಲ್ದಂ, ಮಿಗೆ ಬಳಲ್ದಳ್, ಮಿಗೆ ಬಳಲ್ದುದು ಎಂಬಲ್ಲಿ ಮಿಗೆ ಎಂಬದು ಲಿಂಗತ್ರಯದಲ್ಲಿ ಬಂದಿತೆಂದು, ಭೋಂಕನೊರ್ವಂ ಬಂದಂ, ಮೆಲ್ಲನಿರ್ವರ್ ನುಡಿದರ್, ನೆಟ್ಟನೆಲ್ಲರುಂ ಪೋದರ್ ಎಂಬಲ್ಲಿ ಭೋಂಕನೆ ಮೊದಲಾದವು ಕ್ರಮವಾಗಿ ಏಕದ್ವಿಬಹುವಚನ ಗಳಲ್ಲಿ ಬಂದಿವೆಯೆಂದು, ಕಮ್ಮಿದಂ ಕಮ್ಮಿದಳ್ ಕಮ್ಮಿತು ಎಂಬಿವು ಅವ್ಯಯ ಗಳೆಂದು ತನ್ನ ೮೮ ನೆಯ ಸೂತ್ರದಲ್ಲಿ ಉದಾಹರಣಗಳನ್ನಾಗಿ ಹೇಳಿ ತನ್ನ ವೈಯಾಕರಣತ್ವಕ್ಕೆ ಸಂಶಯವುಂಟಾಗುವಂತೆ ಮಾಡಿದ್ದಾನೆ. ತಾನೆ ಲಾಕ್ಷಣಿಕಂ ನಡೆದುದೆ ಮಾರ್ಗಂ . . . ಕೇಶವಂಗಿದಿಪುಂಟೇ ಮುಂತಾಗಿ ಹೊಗಳಿಕೆಪಡೆದವ ನಿಗೆ ಈ ಅಶಾಸ್ತ್ರೀಯ ನಿರೂಪಣೆ ಶೋಭಿಸುವದಿಲ್ಲ ಇದು ಅವನು ಹೇಳಿದ್ದೋ ಅನ್ಯರು ಸೇರಿಸಿದ್ದೋ ತಿಳಿಯದು. ೯೦ ನೆಯ ಸೂತ್ರದ "ನಿರ್ನೆರಂ ಎಳೆ ದುಯ್ಯೆ" ಎಂಬ ಉದಾಹರಣದಲ್ಲಿ 'ನಿರ್ನೆರಂ' ಪ್ರಥಮೆಯಂತೆ ಕಂಡರೂ ಪ್ರಥಮಾರೂಪವಲ್ಲ. ಅವ್ಯಯಗಳೂ ಪ್ರಾತಿಪದಿಕಗಳಾದದರಿಂದ ಅವಕ್ಕೆ ಪದತ್ವವು ಬರಬೇಕಾದರೆ 'ಸಾಧ್ವನುಶಾಸನ ವಿಭಕ್ತಿ' ಎಂದು ಪ್ರಥಮೆ ಬಂದು ಲುಪ್ತ ವಾಗಿದೆಯೆಂದು ಪ್ರತಿಪಾದಿಸುವ ವೈಯಾಕರಣ ಮಾರ್ಗದಿಂದ ಪ್ರಥಮೆಯೆಂದು ತಿಳಿಯಬಹುದಾದರೂ ( ನಿರ್ನೆರಂ + ಪ್ರಥಮೆಯ ಮ್; 'ಮ್' ಲುಪ್ತವಾಗಿ ನಿರ್ನೆರಂ ಎಂದೇ ರೂಪವು. ನಿರ್ನೆರ + ಮ್ ಎಂದು ಅಲ್ಲ ) ಚಚ್ಚರಂ ನುಡಿದಂ ಎಂಬಲ್ಲಿ ದ್ವಿತೀಯೆಯನ್ನು ಹೇಗೆ ತಿಳಿಯೋಣ? ಚಚ್ಚರಂ ( ತ್ವ-ಸತ್ವರಂ ) ನುಡಿದಂ ಎಂದರೆ ತೀವ್ರವಾಗಿ ನುಡಿದನೆಂಬ ಅರ್ಥವೇ ಹೊರತು ತೀವ್ರವನ್ನು ನುಡಿದನು ಎಂದು ಅರ್ಥವಲ್ಲ. ಚಚ್ಚರಂ ಎಂಬದು ಇಲ್ಲಿ ಕ್ರಿಯಾವಿಶೇಷಣ; ಕರ್ಮಾರ್ಥಕವಲ್ಲ. ಕ್ರಿಯಾವಿಶೇಷಣಾವ್ಯಯಗಳಿಗೆ ಸಾಮಾನ್ಯವಾಗಿ ಸಾಧ್ವನುಶಾಸನವಿಭಕ್ತಿ—ಪ್ರಥಮೆ—ಬರುವದು. ಲಿಂಗತ್ರಯಕ್ಕೆ ವಚನತ್ರಯಕ್ಕೆ ಉದಾಹರಿಸಿದ್ದೂ ಇದೇಮೇರೆಗೆ ಅಶಾಸ್ತ್ರೀಯವಾಗಿವೆ. ಇನ್ನು ಅವ್ಯಯಶಬ್ದದ ವ್ಯುತ್ಪತ್ತಿಯನ್ನು ಹೇಳುವಾಗ ಪ್ರಾಚೀನರು—

**ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು**
**ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಮ್ ।**

ಎಂದು ಲಿಂಗವಚನ ವಿಭಕ್ತಿ ನಿಮಿತ್ತಕವಾದ ವಿಕಾರಗಳಿಲ್ಲದ ಏಕರೂಪದಲ್ಲಿರುವ ಶಬ್ದವು ಅವ್ಯಯ ( ವ್ಯಯ–ವಿಕಾರ–ರಹಿತ ) ಎಂಬ ಅವ್ಯಯ ಸ್ವರೂಪವನ್ನು ಹೇಳಿರುತ್ತಾರೆ  ಆ ಶ್ಲೋಕದ ಭಾಷಾಂತರವನ್ನು ಮಾಡಿ ಬೇಕಾದರೆ ಹೇಳಲಿ, ಆದರೆ ಶಾಬ್ದಬೋಧದಲ್ಲಿ ಅನ್ವಯಕ್ಕೆ ಹೇಳಿದ ನಿಯಮಗಳನ್ನು ಲಕ್ಷಿಸಬೇಡವೇ?

## ಪ್ರಥಮಾ ದ್ವಿತೀಯಾ ವಿಭಕ್ತಿಪ್ರತ್ಯಯ ಲೋಪ ವಿಚಾರ.

**" ಬಿಂದುವದಂತಕ್ಕುೞಿದೆಡೆ ।**
**ಗೆಂದುಂ ಪ್ರಥಮೈಕವಚನದೊಳ್ ಲೋಪಂ "**  **( ದ. ಸೂ. ೧೦೫ )**

ಅಕಾರಾಂತಗಳನ್ನುಳಿದು ಉಳಿದ ಸ್ವರಾಂತ ವ್ಯಂಜನಾಂತಗಳ ಮುಂದಿನ ಪ್ರಥಮಾ ವಿಭಕ್ತಿಯ ಮ್ ಪ್ರತ್ಯಯಕ್ಕೆ ಲೋಪವಾಗುವದು. ಉದಾ: ನರಿ, ಕರು, ತಂದೆ, ತಾಯ್ ಮುಂ. ಪ್ರಥಮೆಯ ರೂಪಗಳು. ನಡುಗನ್ನಡ ಕಾಲದಲ್ಲಿ ಅಕಾರಾಂತಗಳ ಮುಂದಿನ ಮ್ ಪ್ರತ್ಯಯಕ್ಕೂ ಒಮ್ಮೊಮ್ಮೆ ಲೋಪ ವಾಗುತ್ತಿತ್ತು. ಉದಾ: ಇಂತೆಂದನಾ ವಿದುರ. ಹೊಸಗನ್ನಡದಲ್ಲಿ ಜನರಾಡುವ ಭಾಷೆಯಲ್ಲಿ ವಿಶೇಷವಾಗಿ, ಗ್ರಾಂಥಿಕ ಭಾಷೆಯಲ್ಲಿ ಕೆಲವೆಡೆ, ಅಕಾರಾಂತಗಳ ಮುಂದಿನ ಪ್ರಥಮೆಯ ಪ್ರತ್ಯಯಕ್ಕೆ ಲೋಪವು ಕಾಣಬರುವದು. ಉದಾ: ರಾಮ ಹೀಗೆ ಹೇಳಿದ. ಆದರೆ, ದುಷ್ಟ ಜನರನ್ನು ಪೀಡಿಸುವನು, ಹೊಲ ಮನೆಗಳ ಸಮೀಪದಲ್ಲಿ ಇದೆ ಮುಂತಾದ ಕಡೆಗಳಲ್ಲಿ ದುಷ್ಟ ಹೊಲ ಈ ಶಬ್ದ ಗಳ ಮುಂದೆ ತಕ್ಕಷ್ಟು ನಿಲ್ಲದೆ ಮುಂದಿನ ಶಬ್ದಗಳನ್ನು ನುಡಿದರೆ ' ದುಷ್ಟ ಜನರನ್ನು ' ಎಂದು ಬೇಡಾದ ಅರ್ಥಕ್ಕೆ ಎಡೆಯಾಗುವದು ಆದದರಿಂದ ಔಚಿತ್ಯವನ್ನರಿತು ಲೋಪಮಾಡಬಹುದು. ದ್ವಿತೀಯಾವಿಭಕ್ತಿಪ್ರತ್ಯಯವನ್ನೂ ಲೋಪಿಸುವ ವಾಡಿಕೆ ಕೆಲಮಟ್ಟಿಗೆ ಕಾಣಬರುವದು. ಉದಾ: ಹಣ್ಣು ಹರಿ; ಕಾಯಿ ತಿನಬೇಡ, ಹಸಿಯೆಣ್ಣೆ ತಿಂದರೆ ವಾತವಾಗುವದು. ಇನ್ನೂ ದಾರಿಯಂ ನಡೆದನು, ದಾರಿಯ ನಡೆದನು, ದಾರೀ ನಡೆದನು ಈ ಅವಸ್ಥೆಗಳನ್ನು ದಾಟಿ ದಾರಿ ನಡೆದನು ಈ ತರದ ಅವಸ್ಥೆಗೆ ಬಂದಂತೆ ತೋರುತ್ತದೆ. ಹೊಸಗನ್ನಡ ದಲ್ಲಿ ಪ್ರಥಮಾ ದ್ವಿತೀಯಾವಿಭಕ್ತಿಪ್ರತ್ಯಯಲೋಪವನ್ನು ವ್ಯಾಕರಣವು ವಿಧಿಸಬಾರದು; ಕೆಲವೆಡೆ ಲೋಪಮಾಡುವ ವಾಡಿಕೆಯಿದೆ ಎಂದು ಹೇಳುವದು

ಸಾಕೆನಿಸುವದು. ಬೇಡಾದ ಅರ್ಥವಾಗದಲ್ಲಿ ಔಚಿತ್ಯವರಿತು ಗ್ರಾಂಥಿಕ ಭಾಷೆ ಯಲ್ಲಿ ಲೋಪವಮಾಡುವಂತೆ ನಿಯಮನವು ಉಳಿದೀತು.

## ನಾಮಗಳ ಮುಂದೆ ಆಖ್ಯಾತವಿಭಕ್ತಿಪ್ರತ್ಯಯಗಳು—

| | | | | |
|---|---|---|---|---|
| ನೀನ್ | ಜಾಣನ್ | ನೀನ್ | ಜಾಣನಯ್ | (ಜಾಣನ್+ಅಯ್) |
| ನೀಂ | ಜಾಣರ್ | ನೀಂ | ಜಾಣರಿರ್ | ( ಜಾಣರ್+ಇರ್ ) |
| ಆಂ | ಜಾಣರ್ | ಆಂ | ಜಾಣರೆವು | ( ಜಾಣರ್+ಎವು ) |

ಕವಿ ಕೇಶವನೆಂ; ಪಿರಿಯರೆವೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ? ಸಹೋದರರೆವೆಂದೊಸೆದಾಳ್ವುದು ಭೃತ್ಯನಿಕಾಯಮುಂ.

ಈ ಉದಾಹರಣಗಳಲ್ಲಿ ಅಯ್ ಇರ್ ಎನ್ ಎವು ಎಂಬ ಪ್ರತ್ಯಯ ಗಳು ನಾಮಗಳ ಮುಂದೆ ಕಾಣಬರುವವು. ಇಲ್ಲಿ ‘ ನೀನು ಜಾಣನಾದವನು ’ ‘ ನಾವು ಹಿರಿಯರಾದವರು ’ ಎಂದು ಇಷ್ಟೇ ಅರ್ಥವೋ ‘ ನೀನು ಜಾಣ ನಿರುತ್ತೀಯೆ,’ ‘ ನಾವು ಹಿರಿಯರಿರುತ್ತೇವೆ ’ ಎಂದು ಅರ್ಥವೋ? ದರ್ಪಣ ಕಾರನು ಇಲ್ಲಿ ಸೇರಿದ ‘ ಅಯ್ ಇರ್ ಎನ್ ಎವು ’ ಇವು ಆಖ್ಯಾತ ಪ್ರತ್ಯಯಗಳೆಂದು ಹೇಳಿರುತ್ತಾನೆ. ಇದು ಕನ್ನಡದ ವೈಶಿಷ್ಟ್ಯವು.

> ,, ವಿನುತ ಗುಣವಚನದೊಳ್ . . . .
> ಪ್ರವರ್ತಿಪುವಾಖ್ಯಾತ ನಿಯುಕ್ತ ವಿಭಕ್ತಿಗಳವು ’’ ದ. ಸೂ. ೨೧೯

ಇದರಿಂದ ‘ನೀನು ಜಾಣನಿರುತ್ತೀಯೆ,’ ‘ ನಾವು ಹಿರಿಯರಿರುತ್ತೇವೆ ’ ಎಂಬ ಅರ್ಥವೇ ದರ್ಪಣಕಾರನಿಗೆ ಸಮ್ಮತವಾಗಿರಬೇಕೆಂದು ತೋರುತ್ತದೆ. ಆದರೆ ಶಾಸನಕಾರನು—

> **ನಿನೋರ್ವಿಶೇಷಣಸ್ಯ ಕಯ್ಯಿರೇಕಾನೇಕತ್ವೇ ಸುಪಃ ।** **ಶಾ. ಸೂ. ೨೪೫**
> **ಎನಃ ಕೆನ್ಯೆವು** **ಶಾ. ಸೂ. ೨೪೬**

ಈ ಸೂತ್ರಗಳಲ್ಲಿ ನೀನ್ ನೀಂ ಎನ್ ಆಂ ಎಂಬ ಪದಗಳ ವಿಶೇಷಣ ಗಳ ಮುಂದೆ ‘ ಅಯ್ ಇರ್ ಎನ್ ಎವು ’ ಎಂಬಿವು ಕೇವಲ ಆಗಮ ಗಳಾಗಿ ಸೇರುತ್ತವೆ ಎಂದು ಹೇಳುತ್ತಾನೆ. ಶಾಸನಕಾರನು ಹೇಳುವಂತೆ

ಮನೆಯಿದು ಮೊದಲಾದೆಡೆಗಳಲ್ಲಿ ಸಂಧಿಯಲ್ಲಿ ಬರುವ ಆಗಮಗಳಂತೆ ಅಯ್ ಇರ್ ಮೊದಲಾದವು ಕೇವಲ ಆಗಮಗಳೋ? ಪದಗಳ ಅಂತ್ಯಾವಯವವಾಗಿ ಬರುವದರಿಂದ ಮತ್ತು ಅರ್ಥವಿಶೇಷಸೂಚಕಗಳಾಗಿರುವದರಿಂದ ಕೇವಲ ಆಗಮಗಳಲ್ಲ. ನೀಂ ಜಾಣನಯ್ ಎಂಬ ವಾಕ್ಯಕ್ಕೆ ನೀನು ಜಾಣನಿರುವೆ ಎಂಬ ಅರ್ಥವಿದ್ದಂತೆ ಬೋಧವಾಗುತ್ತದೆ. ಪ್ರಥಮಾವಿಭಕ್ತಿಯ ಹೊರತು ಉಳಿದ ವಿಭಕ್ತಿಗಳಲ್ಲಿ ಇಂಥ ಪ್ರಯೋಗಗಳು ಕಾಣಬರುವದಿಲ್ಲ. 'ನೀನ್ ಜಾಣನಯ್ ಇರ್ದಪಯ್' ಹೀಗೆ ಮುಂದೆ ಕ್ರಿಯಾಪದವೂ ಬರುವದಿಲ್ಲ. ಕೇವಲ ಆಗಮಗಳಾಗಿದ್ದರೆ ಮುಂದೆ ಕ್ರಿಯಾಪದವು ಬರುವದಕ್ಕೆ ಅಡ್ಡಿಯಿದ್ದಿಲ್ಲ. ಆದದರಿಂದ ದರ್ಪಣಕಾರನು ಹೇಳಿದಂತೆ ಇವು ಆಖ್ಯಾತವಿಭಕ್ತಿಪ್ರತ್ಯಯಗಳೆಂದು ತಿಳಿಯುವದು ಉಚಿತವು ಮತ್ತು ಇಲ್ಲಿ ಜಾಣನಿರುತ್ತೀಯೆ ಹೀಗೆ ಕ್ರಿಯಾರ್ಥವನ್ನು ಇಟ್ಟುಕೊಳ್ಳುವದೂ ಉಚಿತವು.

ಇನ್ನು **ಕೆಲವು ವಿಶಿಷ್ಟ ಪ್ರಕಾರದ ಲಿಂಗ** ( ಪ್ರಾತಿಪದಿಕ ) ಗಳ ವಿವೇಚನೆ ಮಾಡಿ ಈ ನಾಮಪ್ರಕರಣವನ್ನು ಮುಗಿಸುವ.
ದರ್ಪಣಕಾರನು—

> **ಸಮುಪಾತ್ತಕ್ರಿಯೆಯುಂ ವಾ ।**
> **ಕ್ಯಮಾಲೆಯುಂ ಸುಕವಿರಚಿತನಾಮಮುದಾದಂ ॥**
> **ದಮಗರ್ಗಂ ಲಿಂಗಂ ಮಾರ್ಗ**
> **ಕ್ರಮಮುಂ ಕಾಣಲ್ಕೆ ಬರ್ಪುದಾದ್ಯರ ಕೃತಿಯೊಳ್ ॥ ದ. ಸೂ. ೭೫**

ಈ ಸೂತ್ರದಲ್ಲಿ ಕ್ರಿಯಾಪದಗಳು, ವಾಕ್ಯಗಳು ಪ್ರಾತಿಪದಿಕಗಳಾಗಿ ಕವಿಗಳಿಂದ ಪ್ರಯೋಗಿಸಲ್ಪಟ್ಟಿವೆ ಎಂದು ಹೇಳಿ ನಮೋಸ್ತುಗಳ್ ( ಕ್ರಿ. ) ತತ್ಸವಿತುರ್ವರೇಣ್ಯರ್, ತೋಳ್ಗೊಪ್ಪುವಂ, ಆಳ್ದರ ಕೈದುವೊತ್ತರದೇವಂ ( ವಾಕ್ಯ ) ಮುಂತಾದವನ್ನು ಉದಾಹರಿಸಿದ್ದಾನೆ. ನಮೋಸ್ತು (ನಮಃ ಅಸ್ತು) ಗಳೆಂದು ಸವಣರ್ ( ತ್ಸ. ಶ್ರಮಣ ) ತತ್ಸವಿತುರ್ವರೇಣ್ಯರ್ ಎಂದು ಶ್ರೌತರ್ ( ಕರ್ಮಠರು ) ಎಂದು ಅರ್ಥವನ್ನೂ ಹೇಳಿದ್ದಾನೆ. ತೋಳ್ಗೆ ಒಪ್ಪುವಂ, ಆಳ್ದರ ( ರಾಜರ ), ಕೈದುವೊತ್ತರ ( ಆಯುಧ ಧಾರಿಗಳ ) ಒಡೆಯ ಎಂಬ ಅರ್ಥಗಳನ್ನು ಸಹಜವಾಗಿ ಊಹಿಸಬಹುದು. ಇಂಥವು ಸ್ತುತಿಪಾಠಕರು ರಚಿಸಿದಂಥವು. ಯಾವಾಗಲೂ ನಮೋಸ್ತು ಎನ್ನುವವರು ನಮೋಸ್ತುಗಳು ಯಾವಾಗಲೂ ತತ್ಸವಿತುರ್ವರೇಣ್ಯಂ ಎಂಬ ಮಂತ್ರವನ್ನು ಅನ್ನುವವರು ತತ್ಸವಿತುರ್ವರೇಣ್ಯರು ಆದರು. ಇಂಥ ಲಿಂಗಗಳು ಕವೀಶ್ವರರಿಂದ ಪ್ರಯುಕ್ತ

ವಾಗಿರಬೇಕೆಂದು ಕೇಶಿರಾಜನು ಹೇಳಿದ್ದರೂ ಈಗಲೂ ಇಂಥ ಮಾತುಗಳನ್ನು ಜನರು ರಚಿಸಿಕೊಂಡು ಆಡುವದುಂಟು. ನಮ್ಮ ಒಬ್ಬ ಮಾನ್ಯರು ಮಾತಿನಲ್ಲಿ ತಿಳಿಯಿತೇನು ಎಂದು ಬೇಸರು ಬರುವಷ್ಟು ಬಾರಿ ಪ್ರಯೋಗಿಸುತ್ತಿದ್ದದರಿಂದ ವಿನೋದದಲ್ಲಿ ಅವರಿಗೆ 'ತಿಳಿಯಿತೇನು' ಎಂದು ನಾಮಕರಣವಾಯಿತು. ಈ ಮೇರೆಗೆ ಕೆಲವರು 'ಮತ್ತೇನಪಾ ಅಂದರ' ಮುಂತಾದ ಹೆಸರುಗಳನ್ನು ಪಡೆದಿರಬಹುದು. 'ಇಜಂ' ಗಳ ಯುಗವೆಂದು ಈಗಿನ ಕಾಲವನ್ನು ಯಾರೋ ಟೀಕಿಸಿದರು. ( ನ್ಯಾಶನಾಲಿಜಂ, ಸೋಸಿಯಾಲಿಜಂ, ಪಾರ್ಶಾಲಿಜಂ, ನಶೀಲಾಯಿಜಂ, ಪರ್ಮಿಟಾಯಿಜಂ ಮುಂತಾದವನ್ನು ಅನುಲಕ್ಷಿಸಿ. ) ಇಜಂಗಳ ಯುಗವೆಂದು ಹೇಳುವಾಗ ಇಜಂ ಎಂಬ ಪ್ರತ್ಯಯವನ್ನೂ ಪ್ರಾತಿಪದಿಕವಾಗಿ ಮಾಡಿಕೊಂಡಂತಾಯಿತು. ಮತ್ತು ಎಂಬದು ಅವ್ಯಯವಷ್ಟೇ; ಒಂದು ಪರಿಚ್ಛೇದದಲ್ಲಿ ಹತ್ತೆಂಟು ಬಾರಿ 'ಮತ್ತು' ಬಂದರೆ ಎಷ್ಟು ಮತ್ತುಗಳು ಇಲ್ಲಿ ಬಂದಿವೆ ಎಂದು ಅವ್ಯಯವನ್ನು ಪ್ರಾತಿಪದಿಕವಾಗಿ ಮಾಡಿಕೊಳ್ಳುತ್ತೇವೆ.

ಮೇಲೆ ಹೇಳಿದ ಲಿಂಗಗಳು ಗೌಣ ಇಲ್ಲವೆ ಲಾಕ್ಷಣಿಕ ಶಬ್ದಗಳು. ವಾಚಕ ಲಕ್ಷಕ ವ್ಯಂಜಕ ಎಂಬಿವು ಶಬ್ದಭೇದಗಳು. ಅಭಿಧಾ ಲಕ್ಷಣಾ ವ್ಯಂಜನಾರೂಪವಾದ ವೃತ್ತಿಗಳಿಂದ ಅರ್ಥವನ್ನು ಕೊಡುವವಾಗಿವೆ. ವ್ಯಂಜನಾವೃತ್ತಿಯನ್ನವಲಂಬಿಸಿಯೂ ಪ್ರಾತಿಪದಿಕಗಳನ್ನುಂಟುಮಾಡಿಕೊಳ್ಳಬಹುದು: ಒಮ್ಮೆ ನಾನು ನನ್ನ ಒಬ್ಬ ಸ್ನೇಹಿತರ ಮನೆಯಲ್ಲಿ ಕುಳಿತಾಗ ಅವರು ಹೊರಗೆ ನೋಡಿ 'ಹತ್ತುಮುಕ್ಕಾಲು' ಬಂದರು ಎಂದರು. ನನಗೆ ಅರ್ಥವಾಗಲಿಲ್ಲ. ಅವರು ಹೋದಬಳಿಕ ಸ್ನೇಹಿತರು ಸ್ಪಷ್ಟೀಕರಿಸಿದರು: ಹತ್ತುಮುಕ್ಕಾಲು ಎಷ್ಟು? ೭॥; ಇದರ ಮರಾಠಿ ಶಬ್ದ? ಸಾಡೇಸಾತ; ಸಾಡೇ ಸಾತ—ಶನಿಯ ದಶೆಯ ಕಾಲಾವಧಿ; ಶನಿ. ಹಾಗಾದರೆ ಹತ್ತುಮುಕ್ಕಾಲು=ಶನಿ. ಬಂದವರು ರೇಶನಿನ ಮಾತು, ಪೇಟಿಯ ಉಗ್ರತೆ ಮುಂತಾದ ಬೇಸರಿನ ಮಾತುಗಳನ್ನೇ ಬಹಳ ವೇಳೆ ಮಾತಾಡಿ ಕೊನೆಗೆ ಹತ್ತು ರೂಪಾಯಿ ಕೈಗಡ ಬೇಡಿದ್ದನ್ನು ನೋಡಿದ ನನಗೆ ಹತ್ತುಮುಕ್ಕಾಲೆಂದರೆ ಶನಿ ಎಂಬ ಅರ್ಥವು ಸ್ಪಷ್ಟವಾಗಿ ತಿಳಿಯಿತು. ವ್ಯಂಜನಾವೃತ್ತಿಯಿಂದ ಶಬ್ದಗಳಿಗೆ ಹೀಗೆ ಅರ್ಥ ಕೊಡುವ ಶಕ್ತಿ ಉಂಟಾಗುತ್ತದೆ. ವಿಶ್ವನಾಥಸೂರಿಕೃತ ಸಾಹಿತ್ಯದರ್ಪಣದಲ್ಲಿ ಈ ತರದ ಒಂದು ಉದಾಹರಣವಿದೆ.

> ಭ್ರಮ ಧಾರ್ಮಿಕ ವಿಶ್ವಸ್ತೋ ಸ ಶ್ವಾದ್ಯ ಮಾರಿತಸ್ತೇನ ।
> ಗೋದಾವರೀಕಚ್ಛಕುಂಜವಾಸಿನಾ ದೃಪ್ತಸಿಂಹೇನ ॥

[ —ಎಲೋ ಭಟ್ಟಾ, ಇನ್ನು ನಮ್ಮ ಬೀದಿಯಲ್ಲಿ ನಿರ್ಭಯವಾಗಿ ಶುಕ್ಲವೃತ್ತಿಗೆ ಬಾ. ಇಲ್ಲಿ ಇದ್ದ ನಾಯಿ ನದಿಯ ಕಡೆಗೆ ಹೋದಾಗ ಅಲ್ಲಿಯ ಝುಡುಪಿನಲ್ಲಿದ್ದ ಸಿಂಹವು ಈ ದಿನ ಅದನ್ನು ಕೊಂದಿತು. ]

ನದೀ ತೀರದ ಝುಡುಪಿನಲ್ಲಿ ಸ್ವಚ್ಛಂದ ಕಾಮಲೀಲೆಗಾಗಿ ಹೋಗುತ್ತಿದ್ದ ಒಬ್ಬ ರಮಣಿಯು ಹೂವುಪತ್ರಿಗಳಿಗಾಗಿ ಅಲ್ಲಿಗೆ ಬಂದು ತನ್ನ ವಿಲಾಸಕ್ಕೆ ಅಡ್ಡಿಯಾಗುತ್ತಿದ್ದ ಭಿಕ್ಷುಕ ಬ್ರಾಹ್ಮಣನಿಗೆ ತನ್ನ ಮನೆಯಲ್ಲಿ ಹೇಳಿದ ಮಾತು ಇದು.

ಈ ಮಾತಿನಲ್ಲಿ ನದೀತೀರಕ್ಕೆ ಬರಬೇಡವೆಂಬ ವಿಧಾನವು ಸ್ಪಷ್ಟವಾಗಿ ಇಲ್ಲದಿದ್ದರೂ ಆ ಭಟ್ಟನು ನದೀತೀರದ ಝುಡುಪಿನಲ್ಲಿ ಸಿಂಹವಿದೆ, ಭಯ ಸ್ಥಾನ, ಇನ್ನು ನಾನು ಅಲ್ಲಿಗೆ ಹೋಗಬಾರದು ಎಂದು ನಿರ್ಣಯಿಸಿಕೊಳ್ಳು ತ್ತಾನೆ. ಈ ಶ್ಲೋಕ ವಾಕ್ಯಾರ್ಥವು ವ್ಯಂಜಕವಾಗಿರುವಂತೆ 'ಹತ್ತುಮುಕ್ಕಾಲು' ಈ ತರದ ಶಬ್ದಗಳೂ ವ್ಯಂಜಕಗಳಾಗಿವೆ. ಅವು ವಕ್ತಾರನ ಸಂಕೇತದಿಂದ ಪ್ರಾತಿಪದಿಕಗಳೂ ಆಗುವದುಂಟು.

ಈ ದಿನದ ಉಪನ್ಯಾಸವನ್ನು ಇಲ್ಲಿಗೆ ಮುಗಿಸುತ್ತೇನೆ. ಈ ವರೆಗೆ ನಾನು ೧. ಉಚ್ಚರಣೆಯನ್ನು ಕುರಿತು ಎಚ್ಚರಿಕೆ ೨. ಶಬ್ದವು ದ್ರವ್ಯವೋ ೩. ಱ ೞ ಗಳು, ಅವುಗಳ ನಿಲವು ೪ ೞ ಕಾರದ ಬದ.ಕುವಿಕೆಗಾಗಿ ದರ್ಪಣಕಾರನ ಪ್ರಯತ್ನ, ಅದರ ವಿಫಲತೆಯೂ ವಿರುದ್ಧವಿಧಾನವೂ ೫ ಯಾವ ಯಾವ ಅಕ್ಷರಗಳ ಉಚ್ಚರಣೆಗೆ ಗಮನಕೊಡಬೇಕು ೬. ಅಲ್ಲದೆ ಅಲ್ಲದು—ಅಲ್ಲ ಶಬ್ದ ಗಳ ವಿಚಾರ, ದರ್ಪಣಕಾರನ ತೊಂದರೆ ೭ ಸಂಧಿವಿಚಾರದಲ್ಲಿ ಪ್ರಕೃತಿಭಾವ ಸಂಧಿಯ ವಿವೇಚನೆ ೮. ನಾಮಪದಗಳ ಮುಂದೆ "ಅಯ್ ಇರ್ ಎನ್ ಎವು" ಸೇರಿದ ವಿಚಾರ ೯. ಲಿಂಗಶಬ್ದವನ್ನು ಪ್ರಾತಿಪದಿಕಾರ್ಥದಲ್ಲಿ ಉಪ ಯೋಗಿಸಿದ್ದು ೧೦. ಅವ್ಯಯಲಿಂಗದ ಅಶಾಸ್ತ್ರೀಯ ನಿರೂಪಣೆ ೧೧. ಪ್ರಥಮಾ ದ್ವಿತೀಯಾ ವಿಭಕ್ತಿಪ್ರತ್ಯಯ ಲೋಪವಿಚಾರ ೧೨. ವಿಶಿಷ್ಟ ಪ್ರಕಾರದ ಲಿಂಗ ಗಳು ೧೩. ಲಕ್ಷಕ ಶಬ್ದಗಳಂತೆ ವ್ಯಂಜಕಶಬ್ದಗಳೂ ಲಿಂಗಗಳಾಗುವದು

ಈ ವಿಚಾರಗಳನ್ನು ನನ್ನ ಅಲ್ಪಮತಿಗೆ ತೋರಿದಷ್ಟು ತಮ್ಮ ಮುಂದೆ ಇರಿಸಿದ್ದೇನೆ. ಅವುಗಳ ಗ್ರಾಹ್ಯಾಗ್ರಾಹ್ಯತೆಗಳನ್ನು ನಿರ್ಣಯಿಸುವದು ತಮ್ಮದು.

## ಉಪನ್ಯಾಸ ೨.

ಈ ದಿನ ಕೃತ್ ಸಮಾಸ ಆಖ್ಯಾತ ಪ್ರಕರಣಗಳಿಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಹೇಳುವೆನು. ಕೇಳಿಕೊಳ್ಳಲು ತಮ್ಮನ್ನು ಬಿನ್ನಯಿಸುವೆನು.

**೧. ಕೃದಂತನಾಮಗಳು**— ಧಾತುಗಳ ಮುಂದೆ 'ದ ವ ಅದ' ಪ್ರತ್ಯಯಗಳು ಸೇರಿದರೆ 'ನೋಡಿದ ನೋಡುವ ನೋಡದ' ಈ ತೆರದ ಮೂರು ತರದ ಕೃದಂತನಾಮಗಳು ಉಂಟಾಗುವವು. ಇವು ವಿಶೇಷಣ ಗಳಂತೆಯೂ ಪ್ರಯೋಗಿಸಲ್ಪಡುತ್ತವೆ. ಉದಾ: ನೋಡಿದನಂ ನೋಡಿದಂಗೆ; ನೋಡಿದನಂ ರಾಮನಂ. ವಿಶೇಷಣಗಳಿಗೆಲ್ಲ ನಾಮವಿಭಕ್ತಿಪ್ರತ್ಯಯಗಳು ಸೇರುವ ದಿಲ್ಲವೆಂದುಸಾಮಾನ್ಯರು ತಿಳಿದಿರುತ್ತಾರೆ. ಕೃದಂತ ವಿಶೇಷಣಗಳು ಹಲವೆಡೆಗಳಲ್ಲಿ ಉತ್ತರಪದಗಳೊಡನೆ ಸಮಾಸವಾಗಿರುವದೂ ಇನ್ನು ಕೆಲವೆಡೆಗಳಲ್ಲಿ ಅವ್ಯಯ ಗಳಂತೆ ವಿಭಕ್ತಿಪ್ರತ್ಯಯರಹಿತವಾಗಿ ಪ್ರಯೋಗಿಸಲ್ಪಡುವದೂ ಇದಕ್ಕೆ ಕಾರಣವು ಕೃದಂತವಿಶೇಷಣಗಳಿಗೆ ವಿಭಕ್ತಿಪ್ರತ್ಯಯಗಳನ್ನು ಸೇರಿಸುವದು ಹಳಗನ್ನಡದಲ್ಲಿ ಇತ್ತು. ಉದಾ: ವನಕ್ಕೆ ಪೋದನಂ ರಾಮನಂ ನೆನೆನೆನೆದು ಮಡಿದನ್ ದಶರಥನ್. ಇದು ಸಂಸ್ಕೃತಾನುಸರಣವಿರಬಹುದೇ? ಕನ್ನಡದಲ್ಲಿ ಸಾಮಾನ್ಯ ವಾಗಿ ವಿಶೇಷಣಗಳಿಗೆ ಪ್ರಥಮೆ ಬರುವದು. ಉದಾ: ಶೂರನಾದ ರಾಮನ್, ಶೂರನಾದ ರಾಮನಂ ಮುಂ. ( ಶೂರನಾದ — ಶೂರನ್ + ಆದ; ಶೂರನ್– ಪ್ರಥಮೆ. ) ಹಳಗನ್ನಡದಲ್ಲಿ ವಿಶೇಷಣಗಳಿಗೆ ಪ್ರಥಮೆ ಬರುವ ಸೂಚನೆ ದರ್ಪಣದ ೧೪೦ ನೆಯ ಸೂತ್ರದಲ್ಲಿದೆ.

> **ವಿದಿತ ವಿಶೇಷಣಪದಮವು**
> **ಮೊದಲವಿಭಕ್ತಿಗಳನಾಂತು ವಾಕ್ಯದ ಮೊದಲೊಳ್ ।**
> **ಪದವೆತ್ತುವಗ್ರಕಾರಕ**
> **ಪದದ ವಿಭಕ್ತಿಯನೆ ತಳೆವುವನ್ವಯಮುಖದೊಳ್ ॥** ದ. ೧೪೦

ಪ್ರಯೋಗ—

> **ವೀರನುದಾರಂ ಶುಚಿ ಗಂ**
> **ಭೀರಂ ನಯಶಾಲಿ ಕೈದುವೊತ್ತರ ದೇವಂ ।**
> **ಗಾರೆಜಗರ್ ನೃಪತುಂಗಂ । ಗೆ......**

ವೀರಂಗೆ ಉದಾರಂಗೆ . . . . . ನೃಪತುಂಗಂಗೆ ಆರೆಜಗರ್

ಸಂಗತಸತ್ವರಂ ಕುರುರಾಜಂ ಕರ್ಣಂಗೆ —ಸಂಗತ ಸತ್ವರಂಗೆ ಕುರುರಾಜಂಗೆ ಕರ್ಣಂಗೆ. [ ಸಂಗರ ಸತ್ವಂ . . . . ಕರ್ಣಂಗೆ ಇರಬಹುದೇ ? ]

೧ನೆಯ ಪ್ರಯೋಗದಲ್ಲಿ . . . . . ಕೈದಃವೊತ್ತರದೇವಂ ನೃಪತುಂಗಂಗೆ' ಹೀಗೂ ಇರಬಹುದು. ವಿಶೇಷಣಗಳಿಗೆ ಪ್ರಥಮೆ ಬರುವ (ಕನ್ನಡ) ಮಾರ್ಗ ವನ್ನು ಲಕ್ಷಿಸದೆ ವಿಶೇಷಣಗಳಿಗೆ ವಿಭಕ್ತಿಪ್ರತ್ಯಯಗಳೇ ಸೇರುವದಿಲ್ಲವೆಂಬ ಕಲ್ಪನೆಯನ್ನು ಸಾಮಾನ್ಯರು ಮಾಡಿಕೊಂಡಿರಬಹುದು.

ಕೃದಂತನಾಮಗಳು (ವಿಶೇಷಣಗಳು) ವಿಶೇಷ್ಯಗಳೊಡನೆ ಸಮಾಸ ವಾಗುತ್ತವೆ. ಉದಾ: ಪಾಡುವ ತುಂಬಿ; (ಪಾಡುವುದಾದ ತುಂಬಿ) ಪ್ರಯೋಗ- ಪಾಡುವ ತುಂಬಿ ತೀಡುವೆಲರಾಡುವ ಸೋಗೆ . . .

ಹೀಗೆ ವಿಶೇಷಣ ವಿಶೇಷ್ಯಗಳು ಅವ್ಯವಹಿತವಾಗಿ ಇರುವಾಗ ಸಮಾಸ ವೆಂದು ಹೇಳಬೇಕು. ಈ ಸಮಾಸವನ್ನು ದರ್ಪಣಕಾರನು—

**ಜನಿಯಿಸುಗುಂ ಸಂಖ್ಯಾ ಸ ।**
**ರ್ವನಾಮ ಗುಣವಚನಕೃತ್ಪ್ರಪೂರ್ವಂ ಗಮಕಂ ॥**
**ತನಗತ್ವಂ ಪೆಱಗಿತ್ವಂ ।**
**ತನಗರಿಪದನಿಲ್ಲ ಕರ್ಮಧಾರಯಮದುವುಂ ॥** ದ. ಸೂ. ೧೬೮

ಈ ಸೂತ್ರದಿಂದ ಸಂಖ್ಯಾವಾಚಕ ಗುಣವಾಚಕ ಸರ್ವನಾಮಗಳು ಪೂರ್ವ ಪದಗಳಾಗುವಂತೆ ಕೃದಂತನಾಮಗಳೂ ಪೂರ್ವಪದಗಳಾಗಿ ಸಮಾಸಗಳಾಗುವ ವೆಂದೂ ಈ ಸಮಾಸಗಳಿಗೆ ಗಮಕವೆಂಬ ಹೆಸರೆಂದೂ ಹೇಳಿದ್ದಾನೆ. ಕೃದಂತ ಪೂರ್ವಪದಕವಾದ ಈ ಸಮಾಸವನ್ನು ನಾಗವರ್ಮನು ಹೇಳಿದಂತೆ ತೋರ ಲಿಲ್ಲ. ಈ ಸಮಾಸದಲ್ಲಿ ಉತ್ತರಪದವು ಸಂಸ್ಕೃತವಾಗಿರಬಹುದು. ಎಂದರೆ ಇಲ್ಲಿ ಅರಿಸಮಾಸದೋಷವಿಲ್ಲ. ಉದಾ: ಬೀಸುವ ಚಾಮರಂ, ಪೊಡೆವ ಭೇರಿ ಮುಂ.

ಇಲ್ಲಿ ದರ್ಪಣಕಾರನು ಮೂವತ್ತಾಱು ಗುಣಂಗಳ್, ಆವ ಕಾರ್ಯಂ; ಕಂಡ ವಿಚಾರಂ ಹೀಗೆ ಸಂಸ್ಕೃತೋತ್ತರಪದಕ ಸಮಾಸಗಳನ್ನೂ ಉದಾಹರಿ ಸಿದ್ದಾನೆ. ಶಾಸನಕಾರನು—

**ಕೃತ್ಸಂಖ್ಯಾದ್ಯಾದಿ ಗುಣೋಕ್ತಿಸ್ಸಂಸ್ಕೃತೇನ ಚ ।** ಶಾ. ಸೂ. ೨೯೪

ಎಂಬ ಸೂತ್ರದಲ್ಲಿ ಕೃದಂತ ಸಂಖ್ಯಾವಾಚಕ ಸರ್ವನಾಮ ಗುಣವಾಚಕ ವಿಶೇ

ಷಣಗಳು ಸಂಸ್ಕೃತ ಪದಗಳೊಡನೆಯೂ ಸಮಾಸವಾಗುವವೆಂದು ಹೇಳಿದ್ದಾನೆ. ( ಸಂಸ್ಕೃತಪದಗಳೆಂದರೆ ಇಲ್ಲಿ ಸಂಸ್ಕೃತದಿಂದ ಕನ್ನಡಕ್ಕೆ ವಿಕಾರವಾಗದೆ ಬಂದ ಶಬ್ದಗಳಿಗೆ ಕನ್ನಡ ವಿಭಕ್ತಿಪ್ರತ್ಯಯಗಳು ಸೇರಿದ ರೂಪಗಳೆಂದು ತಿಳಿಯಬೇಕು.)

ಈ ಸಮಾಸಕ್ಕೆ ದರ್ಪಣಕಾರನು ಹೇಳಿದ 'ಗಮಕ' ಎಂಬ ಹೆಸರು ಹೇಗೆ ಬಂದಿತು? ಈ ವಿಷಯವು ವಿಚಾರಣೀಯವಾಗಿದೆ. 'ಗಮಕ' ಎಂದರೆ ಸೂಚಕ. ಸಂಸ್ಕೃತದಲ್ಲಿ **'ಗಮಕತ್ವಾತ್ ಸಮಾಸಃ'** ಎಂದು ಕೆಲವೆಡೆಯಲ್ಲಿ ಸಾಮರ್ಥ್ಯವಿಲ್ಲದಲ್ಲಿಯೂ ಸಮಾಸವನ್ನು ಒಪ್ಪಿದ್ದಾರೆ. ಉದಾಹರಣೆಗಾಗಿ— ದೇವದತ್ತಸ್ಯ ಗುರುಕುಲಂ ( ಗುರುಕುಲ–ಗುರುಗೃಹ ) ಇಲ್ಲಿ 'ಗುರುಕುಲಂ' ಎಂಬ ಸಮಾಸವು ಆಗಬಾರದು. ಏಕೆಂದರೆ, ದೇವದತ್ತಸ್ಯ ಎಂಬ ಷಷ್ಠೀ ವಿಶೇಷಣವು ಗುರುಕುಲಂ ಎಂಬದರ ಏಕದೇಶವಾದ ಗುರು ( ಗುರೋಃ ) ಎಂಬ ಪದಕ್ಕೆ ಸಂಬಂಧಿಸಿ ಹಿಂದೆ ಇರುವಾಗ ಗುರೋಃ ಕುಲಂ ಎಂದು ವ್ಯಸ್ತವಾಗಿಯೇ ಇರಬೇಕು. ತತ್ಪುರುಷದಲ್ಲಿ ಉತ್ತರಪದಾರ್ಥ ಪ್ರಾಧಾನ್ಯವಿರುವದರಿಂದ ದೇವದತ್ತಸ್ಯ ಎಂಬ ಷಷ್ಠೀಪದವು ಸಾಮಾನ್ಯವಾಗಿ ಗುರುಕುಲಂ ಎಂಬದರ ಕುಲಂ ಎಂಬ ಉತ್ತರಪದಕ್ಕೆ ಅನ್ವಯಿಸಬೇಕಾಗುತ್ತದೆ. ಹೀಗಿದ್ದರೂ ಇಂಥ ಸಮಾಸಗಳು ಸಂಸ್ಕೃತದಲ್ಲಿ ಪ್ರಯೋಗದಲ್ಲಿರುವವು. ಆದರೆ ಶಾಬ್ದಬೋಧವು ದೇವದತ್ತನ ಗುರುವಿನ ಮನೆ ಎಂದಲ್ಲದೆ ದೇವದತ್ತನ 'ಕುಲ' ಎಂದು ಅಲ್ಲ. ಹೀಗೆ ದೇವದತ್ತಸ್ಯ ಗುರುಕುಲಂ ಮುಂತಾದ ಪ್ರಯೋಗಗಳು ಗಮಕ (ಸೂಚಕ) ಗಳಾಗಿರುವದರಿಂದ ಸಮಾಸಮಾಡಬಹುದು. ಸಮಾಸಮಾಡಿದರೂ ದೇವದತ್ತಸ್ಯ ಎಂಬ ಷಷ್ಠೀಪದವು 'ಗುರುಕುಲಂ' ಎಂಬ ಸಮಾಸಪದದ ಏಕದೇಶವಾದ ಗುರು ( ಗುರೋಃ ) ಎಂಬ ಪದಕ್ಕೇ ಅನ್ವಯಿಸುವದೆಂದು ಹೇಳಬೇಕು. ಸಮಾಸದ ಮುಖ್ಯಪದವನ್ನು ಬಿಟ್ಟು ಅಮುಖ್ಯ ಪದದೊಡನೆ ಅನ್ವಯಮಾಡುವದು ಗೌಣವಾದರೂ ಇಂಥ ಪ್ರಯೋಗಗಳಿರುವದರಿಂದ ಪ್ರಯೋಗಶರಣಾ ವೈಯಾಕರಣಾ: ಎಂದು ಏಕದೇಶಾನ್ವಯವನ್ನು ಒಡಂಬಟ್ಟು ಗುರುಕುಲಂ' ಇಂಥ ಸಮಾಸಗಳನ್ನು ಹೇಳಿದರು.

ರಘುವಂಶದಲ್ಲಿ—

**ಆಕಾರಸದೃಶಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ**
**ಆಗಮೈಃ ಸದೃಶಾರಂಭ ಆರಂಭಸದೃಶೋದಯಃ ॥**
**ರಜೋಭಿಸ್ತುರಗೋತ್ಕೀರ್ಣೈರಸ್ಪೃಷ್ಟಾಲಕವೇಷ್ಟನೌ ॥**

( — ರಘು. ೧ನೆಯ ಸರ್ಗ )

ಇಲ್ಲಿ ಪ್ರಜ್ಞಯಾ, ಅಗಮ್ಯೈಃ, ತುರಗೋತ್ತೀರ್ಣೈಃ ಎಂಬ ಪದಗಳಿಗೆ ಕ್ರಮವಾಗಿ ಸದೃಶ, ಸದೃಶ, ಅಸ್ಪೃಷ್ಟ ಎಂಬೀ ಏಕದೇಶಗಳೊಡನೆ ಅನ್ವಯವಿರುತ್ತದೆ. ಹೀಗೆ ಸಂಸ್ಕೃತದಲ್ಲೇನೋ ಗಮಕತ್ವಾತ್‌ಸಮಾಸಃ ಎಂದು ಇದ್ದಿತು. ಆದರೆ ಕನ್ನಡದಲ್ಲಿ 'ಗಮಕ' ಹೇಗೆ ಬಂದಿತು, ನೋಡುವ

ಕನ್ನಡದಲ್ಲಿ ಅರಿಸಮಾಸವು ಅರಿಗಳ–ಸಮಾಸವು (ಭಿನ್ನ ಭಾಷೆಗಳ ಪದ ಗಳ ಸಮಾಸವು) ದೋಷವೆಂದು ಎಣಿಸಲ್ಪಟ್ಟಿತು. ಆದರೆ ಕರ್ಮಧಾರಯ ದಲ್ಲಿ ಉತ್ತರಪದವೂ ಕ್ರಿಯಾಸಮಾಸದಲ್ಲಿ ಪೂರ್ವಪದವೂ ಸಂಸ್ಕೃತವಾಗಿರ ಬಹುದು. ಬಿರುದಾವಲಿಯಲ್ಲಿ ಪೂರ್ವೋತ್ತರಪದಗಳೆರಡೂ ಭಿನ್ನಭಾಷೆಯವು (ಸಂಸ್ಕೃತ–ಕನ್ನಡದವು) ಆಗಿರಬಹುದು. ಏಕೆಂದರೆ, ಇಂಥ ಸಮಾಸಗಳ ಪ್ರಯೋಗಗಳಿರುವದೇ ಕಾರಣವು. ಎಂದರೆ ಇಂಥ ಪ್ರಯೋಗಗಳು ಗಮಕ ಗಳಾಗಿರುವದರಿಂದ ಈ ಅರಿಸಮಾಸಗಳನ್ನು ಒಪ್ಪಬೇಕು ಎಂಬ ಅರ್ಥ. ಹೀಗೆ ಪ್ರಯೋಗಗಳು ಗಮಕಗಳಾಗಿರುವದರಿಂದ "ಗಮಕತ್ವಾತ್ ಸಮಾಸಃ", ಕಾಲ ಕ್ರಮದಲ್ಲಿ ಸಂಕ್ಷೇಪವಾಗಿ – 'ಗಮಕಸಮಾಸ' ಎಂದು ಬಂದಿರಬೇಕು. ಹಾಗಾ ದರೆ ಕ್ರಿಯಾಸಮಾಸ, ಸಂಖ್ಯಾಪೂರ್ವಪದಕ ಕರ್ಮಧಾರಯ, ಗುಣವಾಚಕ ಪೂರ್ವಪದಕ ಕರ್ಮಧಾರಯ, ಸರ್ವನಾಮ ಪೂರ್ವಪದಕ ಕರ್ಮಧಾರಯ ಇವುಗಳಿಗೂ (ಸಂಸ್ಕೃತೋತ್ತರಪದಕಗಳಾಗಿದ್ದಲ್ಲಿ, ಕ್ರಿಯಾಸಮಾಸಗಳು ಸಂಸ್ಕೃತ ಪೂರ್ವಪದಕಗಳಾಗಿದ್ದಲ್ಲಿ) ಗಮಕವೆಂದು ಏಕೆ ಹೇಳಲಿಲ್ಲ? ಕ್ರಿಯಾಸಮಾಸಕ್ಕೆ ಕ್ರಿಯಾಸಮಾಸವೆಂಬ ವಿಶಿಷ್ಟವಾದ ಹೆಸರು ಬಂದಿತು. ಉಳಿದ ಗುಣವಾಚಕ ಸರ್ವನಾಮ ಪೂರ್ವಪದಕವಾದ ಸಂಸ್ಕೃತೋತ್ತರ ಪದಕವಾದ ಕರ್ಮಧಾರ ಯಕ್ಕೆ ಗಮಕ ಎಂಬ ಹೆಸರು ಪರಿಶಿಷ್ಟವಾಗಿ ಬಂದಿರಬೇಕು. ಇನ್ನು ಕೃತ್ಸಂಖ್ಯಾ–ಆದ್ಯಾದಿ (–ಸರ್ವನಾಮ) ಗುಣವಾಚಿ ಪೂರ್ವಪದಕಗಳಾದ ಕನ್ನಡೋತ್ತರಪದಕಗಳಾದ ಇಂಥ ಸಮಾಸಗಳಿಗೆ ಕರ್ಮಧಾರಯವೆಂಬ ಹೆಸರೇ ಉಳಿಯಿತು. ಇಲ್ಲಿಯೂ ಕೂಡ ಹಲವೆಡೆಗಳಲ್ಲಿ ಏಕದೇಶಾನ್ವಯವು ಇದ್ದೇ ಇರುವದು. ದರ್ಪಣಕಾರನು ಒಂದೆಡೆಯಲ್ಲಿ "ಆದ ವಿಷ್ಣು ಎಂಬ ಗಮಕ ಸಮಾಸಂ" ಎಂದು ನುಡಿದಿದ್ದಾನೆ. ಅಲ್ಲಿ ಹಿಂದೆ ಇರಬಹುದಾದ ಪದವನ್ನು ಆತನು ಹೇಳಿರದಿದ್ದರೂ 'ಭೂಮ್ಯುದ್ಧಾರಕಂ' ಮೊದಲಾದ ಯಾವದೊಂದು ಪದವು ಅಲ್ಲಿ ಇರಲೇಬೇಕು. ಆಗ ಭೂಮ್ಯುದ್ಧಾರಕಂ ಎಂಬ ಪದಕ್ಕೆ 'ಆದವಿಷ್ಣು' ಇದರ ಏಕದೇಶವಾದ 'ಆದ' ಇದರೊಡನೆ ಅನ್ವಯವನ್ನು ಹೇಳಬೇಕು.

ಬೇರೆ ಪ್ರಯೋಗ—

> ನನೆಯಂಬಂ ಕಂತುವಿಂದಂ ಬಿಸುಡಿಸಿದಲರ್ಗಣ್ಚಂದ್ರಬಿಂಬೋದಯ ಪ್ರಾ ।
> ರ್ಥನೆಯಂ ಕನ್ನೈದಿಲಿಂ ಪಿಂಗಿಸಿ ಕಳೆದ ಮೊಗಂ ಜನ್ಮಸಾಫಲ್ಯಮಂ ಭೂ ।
> ಜನನೇತ್ರಾನೀಕದಿಂದೆಯ್ದಿಸಿದನುಪಮಸೌಂದರ್ಯದೊಳ್ಗಂಡರಂ ಬ ।
> ರ್ದಿನ ಬಲ್ಪಿಂ ಗಂಡುದೊಳ್ತಾಳ್ದಿಸಕದ ಸೊಬಗಾನಾಡ ಪೆಂಡಿರ್ಗೆ ಸಾಜಂ ॥

[ —ಕಾಮನಿಂದ ಪುಷ್ಪಬಾಣವನ್ನು ( ಇದು ಏಕೆ, ಇದಕ್ಕಿಂತ ಹೆಚ್ಚಾದ ಕೆಲಸವನ್ನು ಆ ಪೆಂಡಿರ ಕಣ್ಣು ಮಾಡುವದೆಂದು ) ಬಿಡಮಾಡಿದ ಅಲರ್ಗಣ್ಣು, ಕನ್ನೈದಿಲಿಂದ ಚಂದ್ರಬಿಂಬೋದಯವಾಗಲಿ ಎಂಬ ಬೇಡಿಕೆಯನ್ನು ಬಿಡಿಸಿದ ( ಕನ್ನೈದಿಲೆಗಳ ವಿಕಾಸವು ಈ ಪೆಂಡಿರ ಮುಖದಿಂದಲೇ ಆಗುತ್ತಿರಲು ) ಮುಖವು, ಜನರ ನೇತ್ರಗಳು ಜನ್ಮಸಾರ್ಥಕ್ಯವನ್ನು ಪಡೆಯುವಂತೆ ಮಾಡಿದ, ಅನುಪಮಸೌಂದರ್ಯವುಳ್ಳ ಉತ್ತಮಪುರುಷನನ್ನು ತಮ್ಮ ಪ್ರೌಢಿಮೆಯ ಬಲ ದಿಂದ ಗಂಡುದೊತ್ತುಮಾಡಿಕೊಂಡು ಆಳುವ ಅರ್ಭಟದ ಸೊಬಗು ಆ ನಾಡ ಸ್ತ್ರೀಯರಿಗೆ ಸಹಜ. ( ಕನ್ನಡ ನಾಡಿನ ಈ ಕವಿ ಯಾವ ನಾಡಿನ ನಾರಿಯರನ್ನು ಬಣ್ಣಿಸುತ್ತಾನೋ? ಹಗಲುಗನಸು ಕಾಣುವನೇನೋ? )

ಇಲ್ಲಿ ಕಂತುವಿಂದಂ ಕನ್ನೈದಿಲಿಂ ಎಂಬ ಪದಗಳು ಕ್ರಮವಾಗಿ ಬಿಸುಡಿಸಿ ದಲರ್ಗಣ್, ಕಳೆದ ಮೊಗಂ ಎಂಬ ಸಮಾಸಗಳ ಏಕದೇಶಗಳಾದ ಬಿಸುಡಿಸಿದ ಕಳೆದ ಮೊದಲಾದ ಪೂರ್ವಪದಗಳಿಗೇ ಅನ್ವಯಿಸುವವು.

ಇನ್ನು ಕೆಲವೆಡೆಗಳಲ್ಲಿ ಸಮಾಸವೆಂದು ಹೇಳುವದು ಸಾಧ್ಯವಿಲ್ಲ.

ಪ್ರಯೋಗ—

> ಅರಲ ಸರಲ್ಗದಾರ ಮನಮಂ ಗುರಿಮಾಡದೊ ನಾಡ ನೀಜಿತೆಂ
> ಡಿರ ನಡೆದೊಪ್ಪುವಪ್ಪುವೊಡಗೂಡುವ ನೋಡುವ ಸುತ್ತುವೊತ್ತುವಾ
> ದರಿಪೊಲಿಪೊಲ್ವ ಗೆಲ್ವ ಬಸವಾಗಿಪ ಭೋಗಿಪ ಪೊಯ್ವ ಬಯ್ವ ನಾ
> ಣ್ಗರಿಪೆಚಿತ್ತಿಂಬುಕೆಯ್ವುವೊಳಕೆಯ್ವುವನೇಕವಿಚಿತ್ರಚೇಷ್ಟೆಗಳ್ ।

ಇಲ್ಲಿ ಒಪ್ಪುವ ಅಪ್ಪುವ ಒಡಗೂಡುವ ಮುಂತಾದ ಕೃದಂತವಿಶೇಷಣ ಗಳು ‘ ಚೇಷ್ಟೆಗಳ್ ’ ಎಂಬ ದೂರವರ್ತಿಯಾದ ಪದದೊಡನೆ ಪ್ರತ್ಯೇಕವಾಗಿ ಸಂಬಂಧಿಸಬೇಕಾದದರಿಂದ ವ್ಯಸ್ತಗಳೆಂದು ಹೇಳಬೇಕು.

ಕೆಳಗೆ ಹೇಳಿದ ಪ್ರಯೋಗಗಳಲ್ಲಿ ಕೃ. ವಿಶೇಷಣ ವಿಶೇಷ್ಯಗಳಿಗೆ ಬೇರೆ ಪದಗಳಿಂದ ವ್ಯವಧಾನವು ಆಗಿದೆ:

**ಮೆಟ್ಟಿದ ಕಾಲೊಳ್ ಪಾವುಗೆ**
**ಕಟ್ಟಿದ ಕೊರಲಲ್ಲಿ ಮುತ್ತಿನೇಕಾವಳಿ ತ ।**
**ನ್ನಿಟ್ಟನೊಸಲಲ್ಲಿ ಕತ್ತುರಿ**
**ಬೊಟ್ಟು ಕರಂ ಸೊಬಗುವಡೆದುದಾ ನೃಪಸುತನಾ ॥**

**ಮಾಡುವ ನಿನ್ನೋಳಿಗಮಂ**
**ಪಾಡುವ ನಿನ್ನೊಳ್ಗುಣಂಗಳಂ ಸಂತಸದಿಂ ।**
**ದಾಡುವ ನಿನ್ನೊಡನಮರರ**
**ಗಾಡಿಯೆ ಪೇಳ್ದಪುದು ನಿನ್ನ ಪೆಂಪಂ ಜಿನಪಾ ॥**

ಇನ್ನು ಈ ಕೃದಂತನಾಮಗಳು ಯಾವ ಯಾವ ಅರ್ಥಗಳನ್ನೊಳಗೊಳ್ಳುತ್ತವೆ ಎಂಬ ವಿಚಾರಕ್ಕಾಗಿ ಕೆಳಗಿನ ಪ್ರಯೋಗವನ್ನು ನೋಡುವ.

**ಶ್ರೀರಾಮಾನಟಿ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೇಪವ ।**
**ಕ್ಷೋರಂಗಸ್ಥಿತೆಯಾದ ಪಾದನಖರೋಚಿರ್ಗಂಗೆ ಪೃಥ್ವೀಶಕೋ ॥**
**ಟೀರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂ ।**
**ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ ॥**

( — ಜಗನ್ನಾಥವಿಜಯ )

[ ಯಾವನಿಗೆ ಲಕ್ಷ್ಮಿಯೆಂಬ ನಟಿಯು, ಕೌಸ್ತುಭವೆಂಬ ಪುಷ್ಪಾಂಜಲಿಯನ್ನೆರಚಿದ ವಕ್ಷಸ್ಸೆಂಬ ರಂಗಸ್ಥಲದಲ್ಲಿ ಸ್ಥಿತೆ ಆದಳೋ (ಆದ), ಯಾವನ ಪಾದನಖಕಾಂತಿಯೆಂಬ ಗಂಗೆಯು ಪೃಥ್ವೀಶರ ಕಿರೀಟವನ್ನು ವ್ಯಾಪಿಸುವದಕ್ಕೆ ಸಂದಳೋ (ಸಂದ), ಯಾವನ ಚಕ್ರವೆಂಬ ಸೂರ್ಯನು ದೈತ್ಯರೆಂಬ ಕತ್ತಲೆಯನ್ನು ಗೆದ್ದನೋ (ಗೆಲ್ದ) ಆ ಭೂಭಾರಚ್ಛೇದವಿನೋದಿ ಆದ ಕೃಷ್ಣನು ನಮಗೆ ಆನಂದಸಂದೋಹವನ್ನು ಕೊಡಲಿ. ]

ಇಲ್ಲಿ ಶಾಸನಕಾರನು ವಕ್ಷೋರಂಗಸ್ಥಿತೆ ಆದ ಶ್ರೀರಾಮಾನಟಿ, ಸಂದ ಪಾದನಖರೋಚಿರ್ಗಂಗೆ, ಗೆಲ್ದ ಚಕ್ರರವಿ ಹೀಗೆ ಪೂರ್ವಪದಗಳಾದ ಶ್ರೀರಾಮಾನಟಿ ಮೊದಲಾದ ಪದಗಳೊಡನೆ ಅನ್ವಯವನ್ನು ತೋರಿಸುತ್ತಾನೆ (ಶಾ. ಸೂ. ೯೬ **ಅಕಃಪ್ರಕೃತ್ಯಾ**). ಆದರೆ ಹೀಗೆ ಅನ್ವಯಿಸಿದ ಶ್ರೀರಾಮಾನಟಿ, ರೋಚಿರ್ಗಂಗೆ

ಚಕ್ರರವಿ ಇವುಗಳಿಗೆ ಆ ಪದ್ಯದಲ್ಲಿ ಅನ್ವಯವೆಲ್ಲಿ ಎಂಬವನ್ನು ಆತನು ನೋಡಲೇ ಇಲ್ಲ. (ಆದ ಶ್ರೀರಾಮಮಾನಟಿ, ಗಂಗೆ, ಚಕ್ರರವಿ ಇವು ಕೃಷ್ಣಂ ಈಗೆ' ಎಂಬ ಮುಖ್ಯಭಾಗಕ್ಕೆ ಹೇಗೆ ಅನ್ವಯಿಸುವವು?) ಇಲ್ಲಿ ಆತನು ಕೃದಂತನಾಮಗಳು ಎಲ್ಲ ಕಾರಕಾರ್ಥಗಳಲ್ಲಿ ಉಂಟಾಗುವವೆಂಬವನ್ನು ಲಕ್ಷಿಸಿದಂತೆ ತೋರಲಿಲ್ಲ. ನೋಡಿರಿ:—

**ಮಲಗಿದ** ಕೂಸು — ಮಲಗಿದ — ಮಲಗುವ ಕ್ರಿಯೆಯ ಕರ್ತೃವಾದ — ಕೂಸು; ಕರ್ತ್ರರ್ಥ.

**ನೋಡಿದ** ಊರು — ನೋಡಿದ — ನೋಡುವ ಕ್ರಿಯೆಯ ಕರ್ಮವಾದ ಊರು; ಕರ್ಮಾರ್ಥ.

**ಕಡಿದ** ಕೊಡಲಿ — ಕಡಿದ — ಕಡಿಯುವ ಕ್ರಿಯೆಯ ಕರಣವಾದ ಕೊಡಲಿ; ಕರಣಾರ್ಥ.

ಭಿಕ್ಷೆ **ನೀಡಿದ** ಜಂಗಮ — ನೀಡಿದ — ನೀಡುವ ಕ್ರಿಯೆಯ ಸಂಪ್ರದಾನವಾದ ಜಂಗಮ — ಸಂಪ್ರದಾನಾರ್ಥ

ಎಲೆ**ಯುಉದುರಿದ** ಮರ — ಉದುರಿದ — ಉದುರುವ ಕ್ರಿಯೆಯ ಅಪಾದಾನವಾದ ಮರ; ಅಪಾದಾನಾರ್ಥ.

**ಉಂಡ ಮನೆ** — ಉಂಡ — ಉಣ್ಣುವ ಕ್ರಿಯೆಗೆ ಅಧಿಕರಣವಾದ ಮನೆ— ಅಧಿಕರಣಾರ್ಥ.

ಮೇಲಿನ ಶ್ರೀರಾಮಮಾನಟಿ ಎಂಬ ಉದಾಹರಣ ಪದ್ಯದಲ್ಲಿ ಯಾವನಿಗೆ (ಯಾವನ) ಶ್ರೀರಾಮಮಾನಟಿ ವಕ್ಷೋರಂಗಸ್ಥಿತೆ ಆದಳೋ ಮೊದಲಾಗಿ ಆದ, ನಾದ, ಗೆಲ್ದ ಈ ಕೃದಂತನಾಮಗಳು ಸಂಬಂಧಾರ್ಥದಲ್ಲಿ ಉಂಟಾಗಿವೆ.

ಇಲ್ಲಿಯೂ ಆದ ಮೊದಲಾದ ಕೃದಂತ ವಿಶೇಷಣಗಳು ದೂರವರ್ತಿಯಾದ ಕೃಷ್ಣಂ ಎಂಬ ಪದದೊಡನೆ ಅನ್ವಯಿಸಬೇಕಾದದರಿಂದ ಈ ಕೃದಂತ ವಿಶೇಷಣಗಳು ವ್ಯಸ್ತಗಳೆಂದೇ ಹೇಳಬೇಕು.

ಹೊಸಗನ್ನಡದಲ್ಲಿ ಇಂಥ ಪ್ರಯೋಗಗಳು ಹೆಚ್ಚಾಗಿಯೇ ರೂಢವಾಗಿವೆ.

ಉದಾಹರಣಗಳು— ಮಾರಿದ ನಿನ್ನ ಸರಕು ಎಷ್ಟು? ಉಳಿದ ನಿನ್ನ ಸರಕನ್ನು ಈಗಲೇ ಮಾರು. ಹೋದವರ್ಷ ಕಟ್ಟಿದ ಕಲ್ಲಿನ ಮನೆ ಈ ವರ್ಷ ಬಿದ್ದು ಹೋಯಿತು.

ಇಲ್ಲಿ ಮಾರಿದ ಸರಕು, ಉಳಿದ ಸರಕು, ಕಟ್ಟಿದ ಮನೆ ಹೀಗೆ ವಿಶೇಷಣ ವಿಶೇಷ್ಯಗಳು ಅವ್ಯವಹಿತವಾಗಿ ಇದ್ದರೆ ಸಮಾಸಗಳೆಂದೆನಿಸುತ್ತಿದ್ದವು; ಆದರೆ ನಡುವೆ 'ನಿನ್ನ' 'ಕಲ್ಲನ' ಎಂಬ ಪದಗಳಿಂದ ವ್ಯವಧಾನವಾಗಿರುವದರಿಂದ ಸಮಾಸವೆಂದು ಹೇಳಲು ಆಗುವದಿಲ್ಲ.

ಇನ್ನೊಂದು ಉದಾ:

ಗಾಳಿಯು ಹೊಡೆತಕ್ಕೇಳುವ ತೆರೆಗಳಿಂದ ಸಿಡಿಯುವ ತುಷಾರಗಳಲ್ಲಿ ಸೂರ್ಯ ಕಿರಣಗಳು ಪ್ರತಿಫಲಿಸಿ ಇಂದ್ರಧನುಸ್ಸುಗಳನ್ನುಂಟುಮಾಡುವ, ನೋಡಿದತ್ತೆಲ್ಲ ಕೆಂದಾವರೆ ಹೊಂದಾವರೆ ಬೆಳ್ದಾವರೆಗಳಿಂದ ಶೋಭಿಸುವ, ಅವುಗಳ ಮಕರಂದ ಕ್ಕೆರಗಿ ಭ್ರಮರಗಳು ಝೇಂಕರಿಸುವ ಅಚ್ಛೋದ ಸರೋವರವನ್ನು ಚಂದ್ರಾಪೀಡನು ಕಂಡು ಆನಂದಭರಿತನಾದನು. ( —ತುರಮುರಿ ಕಾದಂಬರಿ )

ಇಲ್ಲಿ ಉಂಟುಮಾಡುವ ಶೋಭಿಸುವ ಝೇಂಕರಿಸುವ ಈ ಕೃದಂತನಾಮಗಳು ವ್ಯಸ್ತಗಳಾಗಿಯೇ ಇವೆ.

ಭಾಷೆಯು ಸ್ಥಿತಿ, ಗತಿಗಳು ಹೀಗಿರುವಾಗ ವಿಶೇಷ್ಯಕ್ಕೆ ವ್ಯವಧಾನವಿದ್ದ, ವಿಭಕ್ತಿಪ್ರತ್ಯಯಗಳನ್ನು ಹೊಂದದೆ ಮೂಲರೂಪದಲ್ಲಿರುವ ಈ ಕೃದಂತನಾಮ ಗಳಿಗೆ ವಾಕ್ಯದಲ್ಲಿ ಪದತ್ವವು ಹೇಗೆ? ಪದಗಳಲ್ಲದಿದ್ದರೆ '**ಅಪದಂ ನ ಪ್ರಯುಂಜೀತ**' ಈ ವಿಧಿಯ ಮೇರೆಗೆ ಪ್ರಕೃತಿಪ್ರಯೋಗದ ದೋಷಕ್ಕೊಳಗಾಗಬೇಕಾಗುವ ದಲ್ಲವೇ? ಈ ವಿಚಾರವನ್ನು ಶಾಸನಕಾರನು ಒಂದೆಡೆಯಲ್ಲಿ ನಿರ್ಣಯಿಸಿದಂತೆ ಕೆಳಗೆ ಹೇಳಿದ ವ್ಯವಸ್ಥೆಯನ್ನು ಅಂಗೀಕರಿಸಬೇಕು. ಆಗ ಭಾಷೆಯ ಶಾಸ್ತ್ರೀ ಯತೆಯನ್ನು ಕಾದುಕೊಂಡಂತಾಗುವದು.

೧. **ಕೃದಂತವಿಶೇಷಣಗಳು ವಿಶೇಷ್ಯಗಳೊಡನೆ ಅವ್ಯವಹಿತವಾಗಿ ಇರುವಲ್ಲಿ ಏಕದೇಶಾನ್ವಯವಿಲ್ಲದಿದ್ದರೆ ಅವು ಸಮಾಸಗಳೆಂದು ನಿಸ್ಸಂಕೋಚ ವಾಗಿ ಹೇಳಬೇಕು.** ಉದಾ: ಪಾಡುವ ತುಂಬಿ.

೨. **ಏಕದೇಶಾನ್ವಯವಿದ್ದರೂ ವಿಶೇಷಣವಿಶೇಷ್ಯಗಳು ಅವ್ಯವಹಿತ ವಾಗಿ ಇರುವಲ್ಲಿಯೂ ಸಮಾಸಗಳೆಂದು ಹೇಳಬೇಕು.** ಉದಾ: ಕಂತುವಿಂದಂ ಬಿಸುಡಿಸಿದಲರ್ಗಣ್.

೩. **ಉಳಿದೆಡೆಗಳಲ್ಲಿ ಕೃದಂತವಿಶೇಷಣಗಳನ್ನು ಪ್ರತ್ಯೇಕಪದಗಳೆಂದು ಹೇಳಬೇಕು.** ಅವಕ್ಕೆ ಅವ್ಯಯಗಳಂತೆ ಸಾಧ್ವಸುಶಾಸನವಿಭಕ್ತಿ ( ಪ್ರಥಮೆ )

ಬಂದು ಲುಪ್ತವಾಗಿದೆಯೆಂದು ಹೇಳಬೇಕು. ಈ ಕೃದಂತವಿಶೇಷಣಗಳಿಗೆ ವಿಭಕ್ತಿ ಪ್ರತ್ಯಯಗಳೇ ಸೇರುವದಿಲ್ಲವೆಂಬ ತಿಳಿವಳಿಕೆ ಅಶಾಸ್ತ್ರೀಯ. ಮೂಢತೆಯ ದ್ಯೋತಕ.

**೨. ಕೇಸಕ್ಕಿ ಬಿಸುಗದಿರ್ ಪಸುವಂದಲ್ ಮುಂತಾದ ಸಮಾಸಗಳಲ್ಲಿ ಪೂರ್ವಪದವು ಯಾವದು ?**

ದರ್ಪಣಕಾರನು—

> **ಒಳ್ಳಿತು ಮೆಲ್ಲಿತು ಬೆಟ್ಟಿತು**
> **ತೆಳ್ಳಿತು ಬಿಸಿದಸಿದು ಕಡಿದು ನಿಡಿದಿನಿದೆಂಬಂ ।**
> **ತುಳ್ಳುವು ತುದುಕಡೆಯೆನೆ ಕ್ಕೆ**
> **ಕೊಳ್ಳಿಂ ಗುಣವಾಚಿ ಮೇಣ್ಮುತ್ತಕಾರಂ ದ್ವಿತ್ವಂ ॥** ದ. ೭೭

ಎಂಬ ಸೂತ್ರದಲ್ಲಿ ಕೆಲವು ಗುಣವಾಚಕಗಳನ್ನು ಹೇಳಿದ್ದಾನೆ. ಅವು ಒಳ್ಳಿತು ಮೆಲ್ಲಿತು ಮು. ಇನ್ನು ಕೆಲವನ್ನು ಪ್ರಯೋಗದಲ್ಲಿ ತೋರಿಸಿದ್ದಾನೆ. ಉದಾ: ತೋರಿತ್ತು ನೇರಿತ್ತು ಕೂರಿತ್ತು ಮುಂ. ಜೇರೆಕಡೆಗಳಲ್ಲಿ ಕೆಲವನ್ನು ತೋರಿಸಿದ್ದಾನೆ. ಕಮ್ಮಿತ್ತು ದಿಮ್ಮಿತ್ತು ಮುಂ. ಇವುಗಳಲ್ಲಿ ಹಲವುಗಳ ಮೇಲೆ 'ಅನೆ, 'ಅಗೆ' ಪ್ರತ್ಯಯಗಳು ಸೇರಲು ಕ್ರಿಯಾವಿಶೇಷಣಾವ್ಯಯಗಳಾಗುವವೆಂದು ಅವ್ಯಯಪ್ರಕರಣದ ಮೊದಲನೆಯ ಸೂತ್ರದಲ್ಲಿ ( ದ. ಸೂ. ೩೦೦ ) ಹೇಳಿದ್ದಾನೆ. ಉದಾ:

ಮೆಲ್ಲಿತು—ಮೆಲ್ಲನೆ, ಮೆಲ್ಲಗೆ; ತೆಳ್ಳಿತು—ತೆಳ್ಳನೆ, ತೆಳ್ಳಗೆ; ನಿಡಿದು—ನೆಟ್ಟನೆ, ನೆಟ್ಟಗೆ; ಕಮ್ಮಿತ್ತು—ಕಮ್ಮನೆ, ಕಮ್ಮಗೆ.

ಮೇಲೆ ತೋರಿಸಿದ ಗುಣವಾಚಕಗಳ ಜೊತೆಗೆ 'ಕಿಸಿದು ಬಿಸಿದು ಪಸಿದು' ಎಂಬಿವನ್ನೂ ಹೇಳಬೇಕಾಗಿತ್ತು. ಈ ಶಬ್ದಗಳನ್ನು ನಾಗವರ್ಮನೂ ಹೇಳಲಿಲ್ಲ ಈ ಶಬ್ದಗಳ ಸ್ಥಳದಲ್ಲಿ ಕೆಚ್ಚನೆ ಬೆಚ್ಚನೆ ಪಚ್ಚನೆ ಎಂಬ ಅನೆ ಪ್ರತ್ಯಯಾಂತ ಅವ್ಯಯಗಳನ್ನು ಹೇಳಿದನು. ನೆಟ್ಟನೆ ಮೆಲ್ಲನೆ ತೆಳ್ಳನೆ ಮೊದಲಾದ ಶಬ್ದಗಳಿಗೆ ನಿಡಿದು ಮೆಲ್ಲಿತು ತೆಳ್ಳಿತು ಮೊದಲಾದವು ಮೂಲಶಬ್ದಗಳಾಗಿರುವಂತೆ ಕೆಚ್ಚನೆ ಬೆಚ್ಚನೆ ಪಚ್ಚನೆ ಶಬ್ದಗಳಿಗೂ ಮೂಲ ಶಬ್ದಗಳಿರಬೇಕೆಂದೂ ಅವು ಕಿಸಿದು ಬಿಸಿದು ಪಸಿದು ಗಳೇ ಇರಬೇಕೆಂದೂ ಕಾಣಬರುತ್ತದೆ. ಈ ಶಬ್ದಗಳನ್ನು ಗುಣವಾಚಕಗಳಲ್ಲಿ ಪರಿಗಣಿಸದ್ದರಿಂದ ಕೇಸಕ್ಕಿ ಬಿಸುಗದಿರ್ ಪಸುವಂದಲ್ ಮೊದಲಾದ ಸಮಾಸಪದಗಳ ರೂಪಸಿದ್ಧಿಯನ್ನು ಹೇಳುವಾಗ ನಾಗವರ್ಮನೂ ಅವನ

ಅನುಯಾಯಿಗಳಾದ ದರ್ಪಣಕಾರನೂ ಶಾಸನಕಾರನೂ ಬಹಳ ಸುತ್ತುವರಿದು ಬರಬೇಕಾಯಿತು.

**ಕೆಚ್ಚನೆ ಬೆಚ್ಚನೆ ಪಚ್ಚನೆ ಶಬ್ದಾನಾಂ ಚಾದೇರ್ಮಃತ್ವಂ ।**

( —ಭಾ. ಭೂ. ಸೂ. ೧೫೨ )

ಈ ಸೂತ್ರದಲ್ಲಿ ನಾಗವರ್ಮನು ಕೆಚ್ಚನೆ ಮೊದಲಾದ ಶಬ್ದಗಳಿಗೆ ಕೆಮ್ ಮೊದಲಾದ ರೂಪಗಳಾಗುವವೆಂದು ಹೇಳಿದನು. ಉದಾಹರಿಸುವಾಗ ಕೆಚ್ಚನೆ ತಳಿರ್ ಎಂದು ಹೇಳದೆ ಕೆಚ್ಚನೆಯ ತಳಿರ್ (ಕೆಂದಳಿರ್) ಮೊದಲಾಗಿ ಹೇಳಿದನು. ಕೆಚ್ಚನೆ ಮೊದಲಾದ ಶಬ್ದಗಳು ಅವ್ಯಯಗಳಾದದರಿಂದ ನಾಮವಿಶೇಷಣಗಳಾಗದೆ ಕ್ರಿಯಾವಿಶೇಷಣಗಳಾಗುವದರಿಂದ ತಳಿರ್ ಮೊದಲಾದ ನಾಮಗಳಿಗೆ ವಿಶೇಷಣಗಳಾಗುವದಿಲ್ಲವಾದದರಿಂದ ಅವನು ಕೆಚ್ಚನೆಯ ಎಂದು ಹೇಳಿರಬೇಕು. (ಕೆಚ್ಚನೆ+ಅ ಎಂದರೆ ಕೆಚ್ಚನೆಯ ಮುಂತಾದವು ಪೂರ್ವಪದಗಳಾಗಬೇಕಾಯಿತು.) ಸಮಾಸವಾದಬಳಿಕ ಈ 'ಅ' ಎಲ್ಲಿ ಹೋಯಿತು? ಅದಕ್ಕೆ ವಿಧಿ ಎಲ್ಲಿ? 'ಮೆಲ್ಲನೆಯ ನುಡಿ' ಸರಿಯೋ 'ಮೆಲ್ಲಿತು ನುಡಿ' ಸರಿಯೋ ಎಂಬದರ ನಿರ್ಣಯವನ್ನು ಸಾಧಾರಣ ಸಂಸ್ಕಾರವುಳ್ಳವನೂ ಹೇಳಲಾಪನು. 'ಮೆಲ್ಲಿತು'ಎಂಬ ಸಮಾನಾಧಿಕರಣ ವಿಶೇಷಣವು ಇರುವಾಗ ಮೆಲ್ಲನೆ ಎಂಬ ಕ್ರಿಯಾವಿಶೇಷಣಾವ್ಯಯಕ್ಕೆ 'ಅ' ಸೇರಿಸಿ ನಾಮವಿಶೇಷಣವನ್ನು ಮಾಡಿಕೊಳ್ಳುವದು ಅವನಿಗೆ ಕುಚೋದ್ಯವೆನಿಸೀತು. ಆದರೆ ಕನ್ನಡಭಾಷೆಯ ಇಂಥ ಅಶಾಸ್ತ್ರೀಯ* ಗತಿಗೆ ಮರುಗಬೇಕಾಗಿದೆ. ಇಂಥ ಒಂದೇ ಎರಡೇ ಹಲವು ಅವ್ಯಾಕೃತರೂಪಗಳು ಬಳಕೆಗೆ ಬಂದಿವೆ. ಕೆಂಪಗಿನ ಮೆತ್ತಗಿನ ಎಡಕಿನ! ) ಎಡಕೆ+ ಇನ್ + ಅ ) ಬಲಕಿನ ವರೆಗಿನ !! ದೇವರೇ ಗತಿ. ಭಾಷೆಯ ಬೆಳವಣಿಗೆಗೆ ಈ ಗತಿಯೂ ಅವಶ್ಯವೆಂದು ಹೊಣೆಗಾರರು ಹೇಳುವರೋ ಏನೋ ?

ಹೋಗಲಿ, ಪ್ರಕೃತವನ್ನನುಸರಿಸುವ: 'ಕೆಚ್ಚನೆ' ಕೆಮ್ ಆಯಿತು; ಮುಂದೆ "**ಸ್ನಂತತಾ ಚ**" (ಭಾ. ಭೂ. ಸೂ. ೧೫೩) ಎಂಬ ಸೂತ್ರದಿಂದ ವ್ಯಂಜನಾದಿ ಶಬ್ದಗಳು ಪರವಾದಾಗ ಕೆಚ್ಚನೆ ಮೊದಲಾದ ಶಬ್ದಗಳಿಗೆ ಕೊನೆಯಲ್ಲಿ 'ಸು' ಸೇರುವದೆಂದು ಹೇಳಿದನು. ಕೆಚ್ಚನೆಯ ಕಲ್ಲು ಕಿಸುಗಲ್ಲು, ಬೆಚ್ಚನೆಯ ಸುಯಲ್ ಬಿಸುಸುಯಲ್ (ಉಚ್ಛ್ವಾಸಾರ್ಥ, ನಾಮ.) ಪಚ್ಚನೆಯ ಪಂದಲ್ ಪಸುಪಂದಲ್

---

* ಕನ್ನಡದ ಅಶಾಸ್ತ್ರೀಯ ಅವ್ಯಾಕೃತಗತಿಯನ್ನು ತಡೆಯುವದು ಅವಶ್ಯ. ವಿದ್ವಾಂಸರು ಈ ವಿಷಯವನ್ನು ಕುರಿತು ಪ್ರಬಂಧವನ್ನು ಬರೆಯಲಿ.

'ಸು' ಆದೇಶವನ್ನು ಹೇಳಿದರೂ ಸಾಕಾಗಲಿಲ್ಲ. ಮತ್ತೆ **ಏಕಾರೇ ವಿಭಾಷ ಇಕಾರಃ** ( ಭಾ. ಭೂ. ಸೂ. ೧೫೪) ಎಂದು ಕೆ ಬೆ ಇವು ಕಿ, ಬಿ ಆಗುವವೆಂದು ಹೇಳ ಬೇಕಾಯಿತು. ಇಷ್ಟು ಹೇಳಿದಾಗ ಕಿಸುಗಲ್ ಬಿಸುಗದಿರ್ ಎಂಬ ರೂಪಗಳ ಸಿದ್ಧಿಯನ್ನು ಹೇಳಿದಂತಾಯಿತು. ದರ್ಪಣಕಾರನು—

**ಜನಿಯಿಸುಗುಂ ಪಚ್ಚನೆ ಕೆ ।**
**ಚ್ಚನೆ ಬೆಚ್ಚನೆಗಳ ಚಕಾರದೊಳ್ ಮತ್ವಂ ಕೆ ।**
**ಚ್ಚನೆಯಾದಿಗೆ ಚತ್ವಂ ಮೋ**
**ಣನಿತರ ಮತ್ವಂ ಸುಕಾರವೆ.ತ್ವಕ್ಕಿತ್ವಂ ॥ ದ. ಸೂ. ೧೮೨**

ಎಂಬ ಸೂತ್ರದಲ್ಲಿ ನಾಗವರ್ಮನು ಹೇಳಿದ ಎಲ್ಲ ಕಾರ್ಯಗಳನ್ನು ಹೇಳಿದನು. ಶಾಸನಕಾರನು —

**ಕಚ್ಚಬ್ಚೈಚ್ಚಶ್ಶಾಮಃ ।** (ಶಾ. ಸೂ. ೩೪೧) ಈ ಸೂತ್ರದಿಂದ ಕೆಚ್ಚನೆ ಮುಂತಾದ ಶಬ್ದಗಳ 'ಚ್ಚನೆ' ಎಂಬ ಭಾಗಕ್ಕೆ ಮಕಾರಾದೇಶವನ್ನು ಹೇಳಿದನು. (ಕೆಂದೆಂಗು ಕೆಂದಳಿರ್ ಮುಂತಾದ ರೂಪಗಳ ನಿಷ್ಪತ್ತಿಗಾಗಿ. )

**ಎತೇಸುರ್ಬೆಮಶ್ಯೋಯರ್ಯಾದಿಷು ಚ** । ಶಾ. ಸೂ. ೩೪೩ ಈ ಸೂತ್ರದಿಂದ ಕೆಮ್ ಬೆಮ್ ಎಂಬಿವು ಕಿಸು ಬಿಸು ಆಗುವವೆಂದು ಹೇಳುವನು. ಉರಿ ಅಕ್ಕಿ ಮುಂತಾದ ಉರ್ಯಾದಿಗಣಪಠಿತ ಶಬ್ದಗಳು ಪರವಾದಾಗ ಕೆಮ್ ಬೆಮ್ ಗಳಿಗೆ "ಇಸು" ಆದೇಶವನ್ನು (ಎಮ್ ಎಂಬ ಭಾಗಕ್ಕೆ) ಹೇಳಿದನು. ಈಗ ಕೆಮ್ ಬೆಮ್ ಇವುಗಳ ಎಮ್ ಎಂಬದಕ್ಕೆ ಇಸು ಆದೇಶವಾಗಲು ಕ್ + ಇಸು, ಬ್ + ಇಸು = 'ಕಿಸು ಬಿಸು' ರೂಪಗಳಾದವು.

ಈಗ ವಿಚಾರಣೀಯ ವಿಷಯವೇನಂದರೆ - (೧) ಬೆಚ್ಚನೆ—ಬೆಮ್,— ಬ್ + ಇಸು–ಬಿಸು; (೨) ಬಿಸಿದು—ಬಿಸು. ಬೆಚ್ಚನೆ ಬಿಸು ಆಗುವದೆಂದು ಹೇಳು ವದು, ಬಿಸಿದು, 'ಬಿಸು' ಆಯಿತೆಂದು ಹೇಳುವದು ಇವುಗಳಲ್ಲಿ ಯಾವದು ಸಮೀಪ ? 'ಬಿಸಿದು' ಶಬ್ದವನ್ನು ಬದಿಗೆ ದೂಡಿ ಬೆಚ್ಚನೆ ಎಂಬದನ್ನು ಮುಂದೆ ಒಡ್ಡುವ ಪಕ್ಷಪಾತಕ್ಕೆ ಕಾರಣವೇನು ? ಇದೇ ಮೇರೆಗೆ ಕಿಸಿದು ಪಸಿದು.

ಕಿಸುಘಂಜೆ ಬಿಸುಗದಿರ್ ಎಂಬ ಸಮಾಸಪದಗಳಲ್ಲಿ ಕಿಸಿದು ಬಿಸಿದು ಎಂಬವು ಪೂರ್ವಪದಗಳೆಂದು ತಿಳಿಯಬೇಕೇ ಕೆಚ್ಚನೆ ಬೆಚ್ಚನೆ ಎಂಬಿವು ಪೂರ್ವಪದಗಳೆಂದು ತಿಳಿಯಬೇಕೇ ಎಂಬದರ ಉತ್ತರವನ್ನು ಈಗ ಯಾರಾದರೂ ಹೇಳಬಹುದು.

ಇನ್ನು ಕೆಂದೆಂಗು (ಚೆಂದೆಂಗು), ಬೆನ್ನೀರ್ ಮೊದಲಾದ ರೂಪಗಳಲ್ಲಿ ಕಿಸಿದು ಬಿಸಿದು ಶಬ್ದಗಳಿಗಿಂತ ಕೆಚ್ಚನೆ ಬೆಚ್ಚನೆ ಶಬ್ದಗಳು ಸಮೀಪವೆಂದು ತೋರಬಹುದು. ಆದರೆ ಕೆಚ್ಚನೆ ಬೆಚ್ಚನೆ ಶಬ್ದಗಳು ನಾಮವಿಶೇಷಣಗಳಲ್ಲವಾದದರಿಂದ ಕೆಚ್ಚನೆ ತೆಂಗು ಮುಂತಾಗಿ ನಾಮವಿಶೇಷಣಗಳಂತೆ ತೆಂಗು ಮೊದಲಾದವುಗಳೊಡನೆ ಅವುಗಳ ಅನ್ವಯವೇ ಆಗಲಾರದು. ಆದದರಿಂದ ಕಿಸಿದು ಬಿಸಿದು ಶಬ್ದಗಳೇ ಕೆಂ ಬೆಂ ಆದವೆಂದು ಪ್ರಕ್ರಿಯೆಯನ್ನು ಹೇಳಬೇಕು. ಈಗಲೂ ಬಳಕೆಯಲ್ಲಿರುವ ಕೇಸಕ್ಕಿ ಬಿಸುಸುಯ್ (ಶ್ವಾಸ) ಮೊದಲಾದವನ್ನೂ ಕಿಸುದಳಿರ್ ಮೊದಲಾದ ಹಳೆಯವನ್ನೂ ಈ ಮಾರ್ಗದಿಂದಲೇ ಸಿದ್ಧಿಸುವದು ಯೋಗ್ಯವಾಗುವದು.

ಈ ಕಿಸಿದು ಬಿಸಿದು ಪಸಿದು ಶಬ್ದಗಳಲ್ಲಿ ಮೊದಲಿನದಾದ 'ಕಿಸಿದು' ಎಂಬ ಅಶ್ಲೀಲಾರ್ಥಕವಾದ ರೂಪವೂ ಬೇರೊಂದು ಇರುವದರಿಂದ ಈ ಮೂರನ್ನೂ ಬಿಟ್ಟು ಕೆಚ್ಚನೆ ಮುಂತಾದವನ್ನು ಇಟ್ಟುಕೊಂಡರೇ ? ಆಗ 'ಕೆಚ್ಚನೆ' ಹೋಗಿ 'ಕಿಸು' ಆಗುವದನ್ನು ಹೇಳುವಾಗ ದ್ರಾವಿಡಪ್ರಾಣಾಯಾಮವಾಗುವದನ್ನು ತಪ್ಪಿಸಲಾಗುವದಿಲ್ಲ. ಮತ್ತು ಅಶಾಸ್ತ್ರೀಯವೂ ಆಗುವದು. ಇನ್ನು ವೈಯಾಕರಣರಿಗೆ ಅಶ್ಲೀಲಾರ್ಥವ್ಯಂಜಕವೆಂಬ ಸಂಕೋಚವೇಕೆ ? ಅಮರಸಿಂಹನು ಮೇಢ್ರೋ ಮೇಹನ ಶೇಫಸೀ (ಅಮರಕೋಶ.) ಎಂದು ಹೇಳುವಲ್ಲಿ ನಾಚಿದನೇ ?

**೩. ಅಂಶಿಸಮಾಸ:**— ಕಿಪ್ಪೊಟ್ಟೆ ಹಿಂಗಾಲ್ ಮುಂತಾದವು ಅಂಶಿ ಸಮಾಸಗಳೆಂದು ಶಾಸನಕಾರನು ಹೇಳಿದ್ದು ಕತ್ತಲೆಯನ್ನು ದಾಟಿ ಬೆಳಕಿಗೆ ಹೋದಂತೆ. ಆ ಹೆಸರಿನಲ್ಲಿ ಶಾಸ್ತ್ರೀಯ ಪ್ರಕಾಶವನ್ನು ಕಾಣುತ್ತೇವೆ. ಇಂಥ ಸಮಾಸಗಳಿಗೆ 'ಅವ್ಯಯೀಭಾವ' ಎಂದು ಮೊದಲು ನಾಗವರ್ಮನು ನಾಮಕರಣ ಮಾಡಿದನು. **"ಪೂರ್ವಪದ ಪ್ರಧಾನೋಽವ್ಯಯೀಭಾವಃ"** (ಭಾ. ಭೂ. ೧೩೯) ಎಂದು ಹೇಳಿ ಕೆಳಗಣ ಕೆರೆ—ಕಿಳ್ಕೆರೆ, ಪೊರಗಣ ಪೈ—ಪೊರವೈ ಮುಂತಾದವನ್ನು ಉದಾಹರಿಸಿದನು. ಆದರೆ ಕೆರೆಯ ಕೆಳಗು (ಕೆಳಭಾಗ) ಕಿಳ್ಕೆರೆ, ಪೈಯ ಪೊರಗು (ಹೊರಭಾಗ) ಎಂದು ಇವುಗಳ ಅರ್ಥವನ್ನು ಹೇಳಿದರೆ ಪೂರ್ವಪದಾರ್ಥಕ್ಕೆ ಮುಖ್ಯತೆ ತೋರುವದು. ಕೆಳಗಣ ಕೆರೆ ಎಂದು ಹೇಳಿದರೆ ಉತ್ತರ ಪದಾರ್ಥಕ್ಕೆ ಮುಖ್ಯತೆ ತೋರುವದು. ಆಗ ಇದು ತತ್ಪುರುಷವೇ ಆಗುವದು. ಇದಲ್ಲದೆ ಕಿಳ್ಕೆರೆ ಪೊರವೈ ಮುಂತಾದವು ಅವ್ಯಯಗಳಾಗುವದಿಲ್ಲ. ಅವ್ಯಯಗಳಲ್ಲದವು ಅವ್ಯಯಗಳಾಗುವದು ಎಂದು 'ಅವ್ಯಯೀಭಾವ' ಶಬ್ದದ ಅರ್ಥವಿರುವದು (ಅಭೂತತದ್ಭಾವೇ ಚ್ವಿಃ). ಕಿಳ್ಕೆರೆ ಪೊರವೈ ಮುಂತಾದವು ನಾಮಗಳು. ನಾಗವರ್ಮನನ್ನು ಅನುಸರಿಸಿ ದರ್ಪಣಕಾರನೂ

**ಅವ್ಯಯೀಭಾವಮಾದಿಪದಮುಖ್ಯತೆಯಿಂ** (ದ. ಸೂ. ೧೬೫) ಎಂಬ ಸೂತ್ರ ದಲ್ಲಿ ಪೂರ್ವಪದ ಮುಖ್ಯ ಸಮಾಸವು ಅವ್ಯಯೀಭಾವವೆಂದು ಹೇಳಿ ಅಂಗಯ್ ಕಿಟ್ಪೊಡೆ ಮೊದಲಾದವನ್ನು ಉದಾಹರಿಸಿದ್ದಾನೆ. ಆದರೆ ನಾಗವರ್ಮನಂತೆ ತಾನೇ ವಿಗ್ರಹವನ್ನು ಹೇಳದೆ ನಮ್ಮ ಮೇಲೆ ಬಿಟ್ಟಿದ್ದಾನೆ. ಆದರೆ ಶಾಸ್ತ್ರೀಯತೆಯ ಕಡೆಗೆ ದೃಷ್ಟಿಯಿದ್ದ ಶಾಸನಕಾರನು ಇವಕ್ಕೆ ಅಂಶಿಸಮಾಸವೆಂಬ ಹೆಸರಿಟ್ಟು "**ಅಂಶಿನಾಽಭಿನ್ನೇನ**" (ಶಾ. ಸೂ. ೩೦೬) ಎಂದು ಸೂತ್ರಿಸಿ ಕೈಯ ಮುಂದು—ಮುಂಗಯ್ ಹೀಗೆ ವಿಗ್ರಹಿಸಿ ಉದಾಹರಿಸಿದ್ದಾನೆ ಅವ್ಯಯೀಭಾವ ವೆಂಬ ಹೆಸರನ್ನು ಇಂಥ ಸಮಾಸಗಳಿಗೆ ಹೇಳದಿದ್ದದ್ದು ಶಾಸನಕಾರನ ಶ್ಲಾಘ್ಯ ವಿಚಾರವು. ಸಂಸ್ಕೃತದ ಉಪಕೃಷ್ಣಂ, ಅನುವಿಷ್ಣು ಮುಂತಾದ ಅವ್ಯಯೀಭಾವ ಸಮಾಸಗಳು ಹೆಸರಿಗೆ ಅನುರೂಪವಾಗಿ ಇವೆ. ಇನ್ನು ಹಿಂಗಾಲ್ ಎಂಬ ಶಬ್ದವು ಹಿಂದಿನ ಕಾಲು ಎಂಬ ಅರ್ಥದಲ್ಲಿ ತತ್ಪುರುಷ, ( ಆಡಿನ ಹಿಂಗಾಲು ಮುರಿಯಿತು;) ಕಾಲಿನ ಹಿಂಭಾಗ ಎಂಬ ಅರ್ಥದಲ್ಲಿ ಅಂಶಿಸಮಾಸ. ( ನನ್ನ ಹಿಂಗಾಲು ಬಾತಿದೆ—ಇಲ್ಲಿ ಕಾಲಿನ ಹಿಂಭಾಗ ಎಂಬ ಅರ್ಥ.)

**ಬಹುವ್ರೀಹಿಸಮಾಸ:**— 'ಬಹುವ್ರೀಹಿ' ಸಮಾಸವನ್ನು ಹೇಳುವದು ಕನ್ನಡಕ್ಕೆ ಬೇಕೇ ಎಂಬದು ವಿಚಾರಣೀಯವಾಗಿದೆ. ನಾಗವರ್ಮನು ಬಹುವ್ರೀಹಿಗೆ–ಕೆಂಗಣ್ಣ ಕುಡುವಿಲ್ಲ, ಕೆಮ್ಮೀಸೆಗ ಮುಂತಾದವನ್ನು ಉದಾಹರಿಸಿದ್ದಾನೆ. ದರ್ಪಣಕಾರನು–ಅಲರ್ಗಣ್ಣ ಬಟ್ಟಮೊಡೆಯ ಕೇಸಡಿಯ ಅಗಲ್ದುರದ ಸಿಡುಮೂಗಿ ಮುಂತಾದವನ್ನು ಉದಾಹರಿಸಿದ್ದಾನೆ. ಶಾಸನಕಾರನೂ ಸಿಡುಗಣ್ಣ ನಾಲ್ತೋಳ ಮೊದಲಾಗಿ ಉದಾಹರಿಸಿದ್ದಾನೆ. ಈ ಎಲ್ಲ ಉದಾಹರಣಗಳಲ್ಲಿ ಕೊನೆಯಲ್ಲಿ ಅ ದ ಇ ಎಂಬಿವು ಸೇರಿವೆ. ಇವನ್ನು 'ಉಳ್ಳ' ಎಂಬ ಅರ್ಥದ ತದ್ಧಿತ ಪ್ರತ್ಯಯಗಳೆಂದು ಹೇಳಿದರೆ ಸಾಲದೇ ? ಸಿಡುಗಣ್ ( ಕರ್ಮಧಾರಯ )+ಅ ಉಳ್ಳವ ಎಂಬ ಅರ್ಥದಲ್ಲಿ ತದ್ಧಿತಪ್ರತ್ಯಯ; 'ಸಿಡುಗಣ್ಣ' ತದ್ಧಿತಾಂತವಾಯಿತು. ಕನ್ನಡದಲ್ಲಿ 'ಉಳ್ಳ' ಎಂಬ ಅರ್ಥವು ಸಮಾಸಘಟಿತಪದಗಳಿಂದ ಬಾರದೆ ಅ ಇ ಮುಂತಾದ ಪ್ರತ್ಯಯಗಳಿಂದಲೇ ಬರುತ್ತದೆ. ಪ್ರತ್ಯಯಗಳು ಸೇರದ ಬಹುವ್ರೀಹಿ ಸಮಾಸೋದಾಹರಣಗಳು ಸಿಕ್ಕುವದಿಲ್ಲ. ಸಂಸ್ಕೃತದಲ್ಲಿಯೂ 'ಕ'ಪ್ರತ್ಯಯವು 'ವ್ಯೂಢೋರಸ್ಕಃ' ಮೊದಲಾದ ಪ್ರಯೋಗಗಳಲ್ಲಿ ಕಾಣಬರುವದು. ಆದರೆ ಕೇವಲ ಸಮಾಸಘಟಕಪದಗಳಿಂದ ಅನ್ಯಾರ್ಥಪ್ರಧಾನತೆ ತೋರುವ ಉದಾಹರಣಗಳು ಅಲ್ಲಿ ವಿಪುಲವಾಗಿ ಇವೆ. ಕನ್ನಡದಲ್ಲಿ ನಾಗವರ್ಮನು ಕಲ್ಲೆರ್ದೆಯಂ ಕಲ್ಲೆರ್ದೆಯುಳ್ ಕಲ್ಲೆರ್ದೆ ಎಂದು ಉದಾಹರಿಸಿದಲ್ಲಿ ಕಲ್ಲೆರ್ದೆ ಎಂಬದು ಪ್ರತ್ಯಯರಹಿತವಾದದ್ದು ಇದೆ. ಇದು ನಪುಂಸಕಲಿಂಗ ವಿಶೇಷ್ಯಕ್ಕೆ ವಿಶೇಷಣವಾಗಿ ಕಲ್ಲಿನಂತೆ ಎದೆ ಉಳ್ಳದ್ದು

ಎಂಬ ಅರ್ಥವನ್ನು ಕೊಡುವದೆಂದು ನಾಗವರ್ಮನ ಆಶಯವಿರುವದು. ಆದರೆ ಈ ಕಲ್ಲೆರ್ದೆ ಪದವು (ಬಹುವ್ರೀಹಿಯಾಗಿ) ಪ್ರಯೋಗಮಾರ್ಗದಲ್ಲಿರುವದೇ, ಇಂಥ ಬೇರೆ ಪ್ರಯೋಗಗಳಿವೆಯೇ ಎಂಬದು ನೋಡಬೇಕಾದ ವಿಷಯ. ಕ್ವಚಿತ್ತಾಗಿ ಒಂದು ಪ್ರಯೋಗವು ಕಂಡಿತೆಂದು ತಿಳಿದರೂ ಮೇಲೆ ಈ ವ್ಯಾಕರಣಕಾರರು ಉದಾಹರಿಸಿದ ಪ್ರಯೋಗಗಳನ್ನು ತದ್ಧಿತಾಂತಗಳೆಂದು ಹೇಳುವದೇ ಉಚಿತವಾಗುವದು.

ನಮ್ಮ ವ್ಯಾಕರಣದ ಸಮಾಸಪ್ರಕರಣಕ್ಕೆ **ಇನ್ನೊಂದು ಸಮಾಸವನ್ನು** ಸೇರಿಸುವದು ಅವಶ್ಯವೆಂದು ತೋರುತ್ತದೆ. ರಾಮನಂತೆ, ರಾಮನಂತೆವೋಲ್ ಮುಂತಾದವನ್ನು ಈಗ ತದ್ಧಿತಾಂತಗಳೆಂದೂ ಅಂತೆ, ವೋಲ್ ಮೊದಲಾದ ಅವ್ಯಯಗಳು ತದ್ಧಿತಪ್ರತ್ಯಯಗಳಂತೆ ನಾಮಪದಗಳ ಕೊನೆಯಲ್ಲಿ ಸೇರುವವೆಂದೂ ಹೇಳುವ ವಾಡಿಕೆ ಇದೆ. ತಸ್ಯ ತುಲ್ಯೇ ವೋಲ್ವೋಲೌ (ಶಾ. ಸೂ. ೪೨೮). ಇಲ್ಲಿ ರಾಮನ, ಅಂತೆ ಎಂಬಿವು ಬೇರೆ ಬೇರೆ ಪದಗಳಾದರೂ 'ರಾಮನಂತೆ' ಒಂದೇ ಪದ. ಬೇರೆ ಬೇರೆ ('ರಾಮನ ಅಂತೆ') ಎರಡು ಎಂದು ಹೇಳಿದರೆ ಇವುಗಳಿಗೆ ಭಿನ್ನ ಕ್ರಮದಲ್ಲಿ ಪ್ರಯೋಗವಿರಬೇಕು; ರಾಮನಾಟಂ ಎಂಬದನ್ನು 'ಆಟಂ ರಾಮನ' ಎಂದು ಪ್ರಯೋಗಿಸುವಂತೆ. ಆದವರಿಂದ 'ರಾಮನಂತೆ' ಒಂದೇ ಪದ. ತದ್ಧಿತಾಪ್ಯಯ.

ಸಂಸ್ಕೃತದಲ್ಲಿ ಸಾದೃಶ್ಯಾರ್ಥಕವಾದ 'ಇವ' ಅವ್ಯಯವುಂಟು. ಈ 'ಇವ'ವು ನಾಮಪದದೊಡನೆ ಸಮಾಸವಾಗುವದೆಂದೂ ಆ ನಾಮಪದದ ವಿಭಕ್ತಿ ಪ್ರತ್ಯಯದ ಲೋಪವಾಗುವದಿಲ್ಲವೆಂದೂ ಹೇಳುತ್ತಾರೆ. ರಘುವಂಶದ ಮೊದಲನೆಯ ಶ್ಲೋಕದಲ್ಲಿಯೇ "ವಾಗರ್ಥಾವಿವ ಸಂಪೃಕ್ತೌ" ಈ ಪ್ರಯೋಗವನ್ನು (ವಾಗರ್ಥೌ+ಇವ= ವಾಗರ್ಥಾವಿವ) ಕಾಣುತ್ತೇವೆ. ಈ ಶ್ಲೋಕದ ವ್ಯಾಖ್ಯಾನದಲ್ಲಿ ಮಲ್ಲಿನಾಥಭಟ್ಟನು "ಇವೇನ ಸಹ ನಿತ್ಯಸಮಾಸೋ ವಿಭಕ್ತ್ಯಲೋಪಶ್ಚ" ಎಂದು ಪ್ರಮಾಣವನ್ನು ತೋರಿಸಿದ್ದಾನೆ. "ಪ್ರಾವೃಷೇಣ್ಯಂ ಪಯೋವಾಹಂ ವಿದ್ಯುದೈರಾವತಾವಿವ" (ರಘು. ಸರ್ಗ ೧) ಹೀಗೆ ಹಲವು ಪ್ರಯೋಗಗಳನ್ನು ಸಂಸ್ಕೃತದಲ್ಲಿ ಕಾಣಬಹುದು. ಹೀಗೆ ರಾಮನಂತೆ ರಾಮನವೋಲ್ ಮುಂತಾದ ಪದಗಳನ್ನೂ ಅಂತೆ, ವೋಲ್ ಮೊದಲಾದವುಗಳೊಡನೆ ಸಮಾಸವಾದ ಸಮಸ್ತ ಪದಗಳೆಂದೂ ಇಲ್ಲಿ ಪೂರ್ವಪದ ವಿಭಕ್ತಿಲೋಪವಿಲ್ಲವೆಂದೂ ಹೇಳುವದು ಸೂಕ್ತವೆಂದು ತೋರುತ್ತದೆ.

**"ಸುಪ್ಸುಪಾ ಸಮಾಸೋ ಬಹುಳಂ"** (ಶಾ. ಸೂ-೫೩೩)ಎಂದು ಶಾಸನ ಕಾರನು ಸುಬಂತವು (ನಾಮಪದವು) ಸುಬಂತದೊಡನೆ (ನಾಮಪದದೊಡನೆ)

ಸಮಾಸವಾಗುವದೆಂದು ಹೇಳಿದ್ದಾನೆ. ಇದು ತತ್ಪುರುಷಾದಿಗಳಲ್ಲಿ ಸೇರದ ಸಾಮಾನ್ಯ ಸಮಾಸವು. 'ತಿಬ್ಬನುಡಿದನಂ' (=ತೀಪ್ರ ನುಡಿದವನನ್ನು), ಚಚ್ಚರನುಡಿದನಂ ( =ಸತ್ವರ ಮಾತಾಡಿದವನನ್ನು ), ನುಡಿದಂತೆ ನಡೆಸಮಂ ಮೊದಲಾದ ಪ್ರಯೋಗಗಳನ್ನೂ ಹೊಸಗನ್ನಡದಲ್ಲಿ ರೂಢವಾಗಿರುವ ಇಂಥ ಹಲವು ಉದಾಹರಣಗಳನ್ನೂ ಶಾಸ್ತ್ರಮಾರ್ಗದಲ್ಲಿ ತರಲು ಈ ವಿಧಾನವು ಆವಶ್ಯಕವಾಗಿದೆ.

## ಪ್ರಯೋಗ

'ಆಖ್ಯಾತ ವಿಭಕ್ತಿ ಪ್ರಯೋಗ' ವಿವೇಚನೆಯನ್ನು ಸ್ವಲ್ಪಮಟ್ಟಿಗೆ ಮಾಡುವದು ಆವಶ್ಯವೆಂದು ತಿಳಿಯುತ್ತೇನೆ. ಪ್ರಚಲಿತವಾಗಿರುವ ಭಾಷೆಯಲ್ಲಿ ಪರಭಾಷೆಗಳ ಶೈಲಿಗಳು ಸೇರುವದು ಸಹಜ. ಕನ್ನಡದಲ್ಲಿ ಈಗ ಇಂಗ್ಲಿಶ್ ಮರಾಠಿ ಮೊದಲಾದ ಬೇರೆ ಬೇರೆ ಭಾಷೆಗಳ ವಾಕ್ಯರಚನಾಪ್ರಕಾರಗಳು ಸೇರಿಕೊಂಡಿವೆ. ಅಲ್ಲಿ ಆಖ್ಯಾತವಿಭಕ್ತಿಪ್ರಯೋಗವನ್ನು ಹೇಳುವದು ತೊಂದರೆಯದು ಆಗುವದು. ಏಕೆಂದರೆ, ಕನ್ನಡದಲ್ಲಿ ಕರ್ತರಿಪ್ರಯೋಗವೊಂದೇ ರೂಢವಾಗಿದ್ದು ಕ್ವಚಿತ್ತಾಗಿ ಕರ್ಮಣಿಪ್ರಯೋಗವು ಕಾಣಬರುವದು. ಭಾವೇ ಪ್ರಯೋಗವೆಂಬದು ಕನ್ನಡದಲ್ಲಿ ಇಲ್ಲ. ಈ ಮಾತನ್ನು ಶಾಸನಕಾರನು ಸ್ಪಷ್ಟವಾಗಿ ಹೇಳಿದ್ದಾನೆ. **"ತಿಙ್ಸಂಜ್ಞಕಾಸ್ತು ಸಂಸ್ಕೃತೇ ಕರ್ತರಿ ಕರ್ಮಣಿ ಭಾವೇ ಚ ಭವಂತಿ, ಭಾಷಾಯಾಂತು ಕರ್ತೃಕರ್ಮಣೋರೇವ ನ ಭಾವೇ; ಅತಏವ ಭಾಷಾಯಾಂ ಧಾತ್ವರ್ಥಲಕ್ಷಣೋ ಭಾವಃ ಕೃದ್ವಾಚ್ಯಏವೇತಿ ರಾದ್ಧಾಂತಃ"** ಈ ವಿಷಯವು **"ಧಾತೋರೇಕಾನೇಕತ್ವೇ ......ಕರ್ತರಿ "** (ಶಾ. ಸೂ. ೪೪೨) ಈ ಸೂತ್ರದ ವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ ನಾವು ಪ್ರಯೋಗವೆಂದರೇನೆಂಬದನ್ನು ವಿಚಾರಮಾಡಿದರೂ ಈ ಮಾತು ಸ್ಪಷ್ಟವಾಗುವದು. ಹೊಸದಾಗಿ ಸೇರಿದ ವಾಕ್ಯರಚನಾಪ್ರಕಾರಗಳು ಕರ್ತರಿ ಕರ್ಮಣಿ ಪ್ರಯೋಗಗಳಲ್ಲಿ ನೇರವಾಗಿ ಸೇರುವದಿಲ್ಲವೆಂಬದನ್ನು ಮುಂದೆ ಹೇಳುವ ಉದಾಹರಣಗಳಲ್ಲಿ ತಾವು ನೋಡಬಹುದು.

ಪ್ರಯೋಗವೆಂದರೆ ಬಾಯಿಂದ ಉಚ್ಚರಿಸುವದು, ಉಪಯೋಗಿಸುವದು ಎಂಬ ಅರ್ಥ. ಯಾವದನ್ನು ಬಾಯಿಂದ ಉಚ್ಚರಿಸುವದು?— ಪ್ರಕರಣವಾದದರಿಂದ ಆಖ್ಯಾತ ಪ್ರತ್ಯಯವನ್ನು; ಕರ್ತರಿಪ್ರಯೋಗ— ಕರ್ತರಿ— ಕರ್ತ್ರರ್ಥದಲ್ಲಿ ಪ್ರಯೋಗಿಸಿದರೆ ಕರ್ತರಿ ಪ್ರಯೋಗ, ಕರ್ಮಣಿ— ಕರ್ಮಾರ್ಥದಲ್ಲಿ ಪ್ರಯೋಗಿಸಿದರೆ ಕರ್ಮಣಿ ಪ್ರಯೋಗ. ( ಕರ್ತರಿ ಕರ್ಮಣಿ ಇವು ಕರ್ತೃ ಕರ್ಮ ಶಬ್ದಗಳ ಸಪ್ತಮೀ ರೂಪಗಳು. )

ಉದಾ:— ಕರ್ತರಿಪ್ರಯೋಗ— ಕೂಸು ಮಲಗುತ್ತದೆ; ಮಲಗುತ್ತದೆ= ಮಲಗು+ಉತ್ತ+ಅದೆ.

ಮಲಗು = ಮಲಗುವಿಕೆ, ಉತ್ತ = ವರ್ತಮಾನಕಾಲ; ಅದೆ=ಕರ್ತೃ. ಶಾಬ್ದಬೋಧ— ಯಾರೋ ಒಬ್ಬರು ಕರ್ತೃವಾಗಿ ಉಳ್ಳ ವರ್ತಮಾನಕಾಲದ ಮಲಗುವಿಕೆ. ಆ ಕರ್ತೃ ಯಾರು ಎಂಬದನ್ನು ತೋರಿಸುವದಕ್ಕೆ ವಾಕ್ಯದಲ್ಲಿ 'ಕೂಸು' ಬಂದಿದೆ.

ಕರ್ಮಣಿ ಪ್ರಯೋಗ— ಭೀಮನಿಂದ ಮರವು ಕಡಿಯಲ್ಪಡುತ್ತದೆ. ಕಡಿಯಲ್ಪಡುತ್ತದೆ=ಕಡಿ+ಅಲ್ಪಡು+ಉತ್ತ+ಅದೆ. ಅದೆ=ಕರ್ಮ. ಶಾಬ್ದಬೋಧ— ಯಾವದೋ ಒಂದು ಕರ್ಮವಾಗಿ ಇರುವ ವರ್ತಮಾನಕಾಲದ ಕಡಿಯುವಿಕೆ. ಆ ಕರ್ಮವು ಯಾವದು ಎಂಬದನ್ನು ತೋರಿಸುವದಕ್ಕೆ ವಾಕ್ಯದಲ್ಲಿ 'ಮರವು' ಬಂದಿದೆ.

ಕರ್ತರಿ ಪ್ರಯೋಗದಲ್ಲಿ ಕರ್ತೃವನ್ನು, ಕರ್ಮಣಿ ಪ್ರಯೋಗದಲ್ಲಿ ಕರ್ಮವನ್ನು ಆಖ್ಯಾತ ಪ್ರತ್ಯಯವು ಸಾಮಾನ್ಯವಾಗಿ, ಅಂದರೆ ಯಾರೋ ಒಬ್ಬರು ಕರ್ತೃ, ಯಾವದೋ ಒಂದು ಕರ್ಮ ಎಂದು ಹೇಳುತ್ತದೆ. ಮಲಗುತ್ತದೆ ಮುಂತಾದ ಕ್ರಿಯಾಪದವನ್ನು ಕೇಳಿದಾಗ ಮಲಗುವ ಕ್ರಿಯೆಯ ಒಬ್ಬ ಕರ್ತೃ, ಕಡಿಯಲ್ಪಡುತ್ತದೆ ಎಂದು ಕೇಳಿದಾಗ ಕಡಿಯುವ ಕ್ರಿಯೆಯ ಒಂದು ಕರ್ಮವು ನಮಗೆ ತೋರುತ್ತದೆ. ಆ ಕರ್ತೃ, ಕರ್ಮ ಯಾರು ಎಂದು ವಿಶೇಷವಾಗಿ ತೋರಿಸುವದಕ್ಕಾಗಿ ಕೂಸು ಮರವು ಎಂಬಿವು ವಾಕ್ಯದಲ್ಲಿ ಬರುತ್ತವೆ. ಕೂಸು ಮರವು ಇವುಗಳ ಮುಂದೆ ಪ್ರಥಮಾ ವಿಭಕ್ತಿ ಪ್ರತ್ಯಯವು ಏತಕ್ಕೆ ? ಆಖ್ಯಾತ ಪ್ರತ್ಯಯವೇ ಕರ್ತೃ, ಕರ್ಮಗಳನ್ನು ಹೇಳುತ್ತದೆ ಎನಬಹುದು. ಹೌದು, ಈ ವಿಚಾರವು "ಮುಕ್ತೇ" ( ಶಾ. ಸೂ. ೨೨೭ ) ಎಂಬ ಸೂತ್ರದಲ್ಲಿ ಬಂದಿದೆ. ಕೂಸು ಮರವು ಎಂಬಲ್ಲಿ ಬಂದ ಪ್ರಥಮೆಯು ಸಾಧ್ವನುಶಾಸನ ವಿಭಕ್ತಿಯು. ಕರ್ತೃಕರ್ಮಾರ್ಥವಾದದ್ದು ಅಲ್ಲ. ವಿಭಕ್ತಿಗಳು ಕಾರಕವಿಭಕ್ತಿ, ಉಪಪದವಿಭಕ್ತಿ, ಸಾಧ್ವನುಶಾಸನವಿಭಕ್ತಿ ಎಂದು ಮೂರು ಬಗೆಯವು. ಅಪದಂ ನ ಪ್ರಯುಂಜೀತ ಎಂಬ ವಿಧಿಗೆ ಅನುಸರಿಸಿ ಪದತ್ವವನ್ನು ಹೇಳಬೇಕಾಗಿರುವಲ್ಲಿ ಕರ್ಮಾದಿ ಕಾರಕಾರ್ಥಗಳಲ್ಲಿ ನಿಯುಕ್ತವಾಗುವ ದ್ವಿತೀಯಾದಿಗಳು ಬಾರದೆ ಯಾವ ಅರ್ಥವೂ ತೋರದಿರುವಲ್ಲಿ ಪದತ್ವಸಿದ್ಧಿಗಾಗಿ ಪ್ರಥಮೆ ಬರುವದೆಂದು ವ್ಯಾಕರಣವು ಹೇಳುವದು.

ಈಗ ಹೊಸತರದ ಕೆಲವು ವಾಕ್ಯರಚನಾ ಪ್ರಕಾರಗಳನ್ನೂ ಅವುಗಳ ಪ್ರಯೋಗ ವಿಚಾರವನ್ನೂ ನೋಡುವ.

**೧. ಎಲ್ಲರಿಗೂ ಈಸಲು ಬರಬೇಕು.**

**೨. ಸಭೆಯಲ್ಲಿ ಕಾರ್ಯದರ್ಶಿಯಿಂದ ಮಂತ್ರಿಗಳ ಭಾಷಣವನ್ನು ಓದಲಾಯಿತು.**

**೩. ಇಲ್ಲಿ ರಾಮಾಯಣ ಕಥೆಯನ್ನೇ ಸಂಕ್ಷೇಪವಾಗಿ ಕೊಟ್ಟಿದೆ.**

ಇಲ್ಲಿ ಈಸಲು, ಓದಲು, ಕೊಟ್ಟು ಈ ಕ್ರಿಯಾವಾಚಕಗಳು ಈಸುವಿಕೆ ಓದುವಿಕೆ ಕೊಡುವಿಕೆ ಹೀಗೆ ಭಾವಾರ್ಥಕಗಳು— ಕ್ರಿಯಾರ್ಥಕಗಳು, ಪ್ರಥಮೆಯಲ್ಲಿವೆ ಎಂದು ಉಪಪತ್ತಿಯನ್ನು ಹೇಳಿ ಕರ್ತರಿ ಪ್ರಯೋಗವನ್ನು ಹೊಂದಿಸಬೇಕಾಗುವದು. ಇವು ಕರ್ಮಣಿ ಪ್ರಯೋಗಗಳೂ ಭಾವೇ ಪ್ರಯೋಗಗಳೂ ಅಲ್ಲವೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಕರ್ಮಣಿ ಪ್ರಯೋಗದ ಕ್ರಿಯಾಪದವು ಕರ್ಮವನ್ನು ತೋರಿಸುವದಾಗಿರಬೇಕು, 'ಅಲ್ಪಡು' ಸೇರಿದ ರೂಪವಾಗಿರಬೇಕು. ಭಾವೇ ಪ್ರಯೋಗದಲ್ಲಿ ಕ್ರಿಯಾಪದವು 'ಭಾವ'ವನ್ನು ಹೇಳುವದು ಕನ್ನಡದಲ್ಲಿ ಸಂಭವನೀಯವಲ್ಲವೆಂದು ಶಾಸನಕಾರನು ಖಂಡಿತವಾಗಿ ಹೇಳಿರುತ್ತಾನೆ. ಸಂಸ್ಕೃತದಲ್ಲಿ 'ಸ್ಥೀಯತೇ' ಭಾವೇಪ್ರಯೋಗದ ಕ್ರಿಯಾಪದವು; ಇದನ್ನು ಕನ್ನಡದಲ್ಲಿ ಹೇಳಿದರೆ ಇರೋಣವಾಗುತ್ತದೆ ಎಂದು ( ಇರೋಣವು+ಆಗುತ್ತದೆ ). ಕೇವಲ 'ಇರೋಣವು' ಇಷ್ಟೇ ಹೇಳಿದರೆ ( ರಾಮನಿಂದ ಇರೋಣವು ) ವಾಕ್ಯವು ಪೂರ್ಣವಾಗುವದಿಲ್ಲ; ರೂಢಿಯೂ ಇಲ್ಲ.

ಇನ್ನು ಕರ್ಮಣಿ ಪ್ರಯೋಗ ವಿಷಯದಲ್ಲಿ ಒಬ್ಬ ಪ್ರತಿಪನ್ನ ವಿದ್ವಾಂಸರು ಕಳೆದ ಫೆಬ್ರುವರಿ ತಿಂಗಳ 'ಪ್ರಾಥಮಿಕ ಶಿಕ್ಷಣ' ಪತ್ರಿಕೆಯಲ್ಲಿ **ಎತ್ತಿದ ಆಕ್ಷೇಪವನ್ನೂ** ಅದಕ್ಕೆ ನನ್ನ ಅಲ್ಪಮತಿಗೆ ತೋರಿದ **ಸಮಾಧಾನವನ್ನೂ ಹೇಳುತ್ತೇನೆ.** ಕರ್ಮಣಿ ಪ್ರಯೋಗವೆಂದು ಹೇಳುತ್ತಿದ್ದ 'ರಾಮನಿಂದ ರಾವಣನು ಕೊಲ್ಲಲ್ಪಡುತ್ತಾನೆ' ಮುಂತಾದ ವಾಕ್ಯಗಳು ಕರ್ತರಿಪ್ರಯೋಗದವೆಂದು ಹೇಳಬೇಕೆಂದೂ ಕನ್ನಡದಲ್ಲಿ ಕರ್ಮಣಿಪ್ರಯೋಗವು ಇಲ್ಲವೆಂದೂ ಅವರು ಪ್ರತಿಪಾದಿಸಿದ್ದಾರೆ.

ಅವರ **ಆಕ್ಷೇಪಣೆಯ ಸಾರಾಂಶವು** ಇದು: "ಕೊಲ್ಲಲ್ಪಡುತ್ತಾನೆ= ಕೊಲ್ಲಲ್ಪಡು ( ಧಾತು )+ಉತ್ತ+ಆನೆ. ಕೊಲ್ಲಲ್ಪಡು— ಕೊಲ್ಲು+ಅಲ್ಪಡು=ಕೊಲ್ಲಲ್ಪಡು ಎಂದರೆ ಕೊಲ್ಲುವ ಕ್ರಿಯೆಯನ್ನು ಅನುಭೋಗಿಸು ಎಂದು ಅರ್ಥ.

ಇಡಿ ಕ್ರಿಯಾಪದಕ್ಕೆ ಕೊಲ್ಲುವ ಕ್ರಿಯೆಯನ್ನು ಅನುಭೋಗಿಸುತ್ತಾನೆ ಎಂದು ಅರ್ಥ. ಹಾಗಾದರೆ ಕ್ರಿಯೆಯ ಕರ್ತೃ ರಾವಣನು. ವಾಕ್ಯವು ಕರ್ತರಿ ಪ್ರಯೋಗದ್ದಾಯಿತು. "ರಾವಣ ಇಜ್ ಕಿಲ್ಡ್ ಬಾಯ್ ರಾಮ" ಎಂಬ ಇಂಗ್ಲಿಶ್ ವಾಕ್ಯದಲ್ಲಿ 'ರಾವಣ'— ಕರ್ತೃ, 'ಇಜ್ ಕಿಲ್ಡ್'— ಕ್ರಿಯಾಪದ. ಕರ್ಮಣಿ ಪ್ರಯೋಗದ ವಾಕ್ಯರಚನೆ ಕನ್ನಡಕ್ಕೆ ಸಹಜವಾದದ್ದು ಅಲ್ಲ: ಸಂಸ್ಕೃತದಿಂದ ಬಂದದ್ದು. ಆದರೂ ರಾವಣನು ಕರ್ಮ ಎಂದು ಹೇಳಬಾರದು ಕರ್ತೃ ಎಂದು ಹೇಳಬೇಕು.

**ಸಮಾಧಾನ**—'ರಾಮನಿಂದ....ಕೊಲ್ಲಲ್ಪಡುತ್ತಾನೆ' ಈ ತರದ ವಾಕ್ಯರಚನೆ ಸಂಸ್ಕೃತದಿಂದ ಬಂದದ್ದು ಎಂದು ಒಪ್ಪುತ್ತೀರಿ. ಈ ವಾಕ್ಯರಚನೆಗೆ ಮೂಲವಾದ 'ರಾಮೇಣ ರಾವಣೋ ಹನ್ಯತೇ' ಈ ವಾಕ್ಯಕ್ಕೆ ಸಂಸ್ಕೃತದಲ್ಲಿ ಯಾವ ಅರ್ಥವಿತ್ತೋ ಅದೇ ಅರ್ಥವೇ ಬರಬೇಕೆಂದು ಅದನ್ನು ಕನ್ನಡಿಸುವವನ ಅಭಿಪ್ರಾಯವಿರಬೇಕಷ್ಟೇ. ನೀವು ಹೇಳುವಂತೆ 'ರಾವಣನು' ಕರ್ತೃವಾದರೆ ಆ ವಾಕ್ಯದಲ್ಲಿದ್ದ 'ರಾಮನಿಂದ' ಹೇತು ಆಗಬೇಕಾಯಿತು. ಎಂದರೆ ರಾಮನಿಂದ (ರಾಮನು ಕಾರಣ) ರಾವಣನು ಕೊಲ್ಲುವಿಕೆಯನ್ನು ಅನುಭೋಗಿಸುತ್ತಾನೆ ಎಂದು ಅರ್ಥವಾಗಬೇಕಾಯಿತು. ಆಗ ರಾವಣನು ಕೊಲ್ಲುವಿಕೆಗೆ ವಿಷಯ— ಎಂದರೆ ಕರ್ಮ ಆಗುತ್ತಾನೆ ಎಂಬ ಸಂಸ್ಕೃತದ ಅರ್ಥವು ಕನ್ನಡದಲ್ಲಿ ಬರಲಿಲ್ಲ. ಮೂಲ ಅರ್ಥವನ್ನು ಅನುಸರಿಸಿ ನಾವು ಅಲ್ಲಿ ಇದ್ದ ಧಾತು, ಪ್ರತ್ಯಯ ಇವುಗಳಿಗೆ ಅರ್ಥವನ್ನು ಇಟ್ಟುಕೊಳ್ಳಬೇಕು. ಹಾಗಾದರೆ 'ಕೊಲ್ಲಲ್ಪಡುತ್ತಾನೆ' ಎಂಬಲ್ಲಿ ಕೊಲ್ಲು ಎಂಬುದೇ ಧಾತು; 'ಕೊಲ್ಲಲ್ಪಡು' ಧಾತುವಲ್ಲ; 'ಅಲ್ಪಡು' ಎಂಬುದು ಕರ್ಮಾರ್ಥದಲ್ಲಿ ಆಖ್ಯಾತ ಪ್ರತ್ಯಯವು ಒಂದಿರುವದಕ್ಕೆ ಸೂಚಕ; 'ಕೊಲ್ಲಲ್ಪಡು' ಕೊಲ್ಲುವ ಕ್ರಿಯೆಗೆ ವಿಷಯವಾಗು ಎಂದು ಅರ್ಥ. ಇನ್ನು ಈ ತರದ ವಾಕ್ಯರಚನೆಯಲ್ಲಿ 'ರಾಮನಿಂದ ರಾವಣನು ಕೊಲ್ಲುವಿಕೆಯನ್ನು ಅನುಭೋಗಿಸುತ್ತಾನೆ' ಎಂಬ ಅರ್ಥವನ್ನೇ ಇಟ್ಟುಕೊಳ್ಳುವದಾದರೆ ಪ್ರಯೋಕ್ತೃವು ರಾಮನಿಂದ ರಾವಣನು ಸಾಯುತ್ತಾನೆ ಎಂದು ಹೇಳುತ್ತಿದ್ದನಲ್ಲವೇ ? ಈ ತರದ (ರಾಮನಿಂದ....ಲ್ಪಡುತ್ತಾನೆ) ವಾಕ್ಯರಚನೆಯ ದ್ರಾವಿಡ ಪ್ರಾಣಾಯಾಮವನ್ನು ಏಕೆ ಮಾಡುತ್ತಿದ್ದನು? ಇಂಗ್ಲಿಶಿನಲ್ಲಿ ಕ್ರಿಯೆಯನ್ನು ಅನುಭೋಗಿಸುವವನು ಕರ್ತೃವೆಂದು ಹೇಳುತ್ತಿದ್ದರೆ ಎಲ್ಲ ಭಾಷೆಗಳವರೂ ಹೇಳಬೇಕೆಂದು ಇಲ್ಲ. ಸಂಸ್ಕೃತದಲ್ಲಿ ಕ್ರಿಯಾಪದಕ್ಕೆ ವ್ಯಾಪಾರ, ಫಲ ಈ ಎರಡು ಅರ್ಥಗಳು. ಈ ಎರಡೂ ಏಕಾಶ್ರಯವಾದರೆ ಅಕರ್ಮಕಧಾತು; ವ್ಯಾಪಾರಾಶ್ರಯ ಒಂದು, ಫಲಾಶ್ರಯ

ಮತ್ತೊಂದು ಆದರೆ ಸಕರ್ಮಕವೆಂಬ ವ್ಯವಸ್ಥೆ ಇದೆ. ಇಲ್ಲಿ ಶರೀರದಿಂದ ಪ್ರಾಣ ವಿಯೋಗಮಾಡುವದು ಎಂಬ ವ್ಯಾಪಾರವು ರಾಮನಿಷ್ಠ; ಆದದರಿಂದ 'ರಾಮ' ಕರ್ತೃ. ಈ ವ್ಯಾಪಾರದಿಂದ ಆಗುವ ಸಂಕಟವು ಉಂಟಾದದ್ದು ಫಲ. ಅದು ರಾವಣ ನಲ್ಲಿ ಇರುವದರಿಂದ 'ರಾವಣ' ಕರ್ಮ. 'ಅಲ್ಪಡು'ಸೇರಿದ ಧಾತುವಿಗೆ (ಕೊಲ್ಲ ಲ್ಪಡು) ಕ್ರಿಯಾಫಲವನ್ನು ಹೊಂದು-ಕ್ರಿಯೆಗೆ ವಿಷಯವಾಗು ಎಂದು ಅರ್ಥ. ಅಲ್ಪಡು ಸೇರಿದಾಗ ಕ್ರಿಯೆಯನ್ನು ಅನುಭೋಗಿಸು ಎಂಬ ಅರ್ಥವ ನ್ನಿಟ್ಟುಕೊಳ್ಳುವದಾದರೆ ಸಕರ್ಮಕ ಧಾತುಗಳನ್ನೇ ಹೀಗೆ ಏಕೆ ಪ್ರಯೋಗಿಸ ಬೇಕು? ಕೂಸು ಮಲಗಲ್ಪಡುತ್ತದೆ (ಮಲಗುವ ಕ್ರಿಯೆಯ ವಿಶ್ರಾಂತಿರೂಪ ಫಲವನ್ನು ಅನುಭೋಗಿಸುತ್ತದೆ) ಎಂದು ಯಾಕೆ ಪ್ರಯೋಗಿಸಬಾರದು ? ನಾನು ಹೇಳುವದು ಇಷ್ಟೇ, ಈ ವಾಕ್ಯರಚನೆ ನೀವೂ ಒಪ್ಪುವಂತೆ ಸಂಸ್ಕೃತದಿಂದ ಬಂದದ್ದು; ಎಂದರೆ ಸಂಸ್ಕೃತದ ಕರ್ಮಣಿಪ್ರಯೋಗದ ಅರ್ಥವು ಬರುವದಕ್ಕಾಗಿ. ಎಂದ ಬಳಿಕ ಆ ಅರ್ಥಕ್ಕೆ ಬಾಧೆ ಬರುವಂತೆ ಅಲ್ಲಿ ಇದ್ದ ಧಾತು, ಪ್ರತ್ಯಯಗಳಿಗೆ ಅರ್ಥವನ್ನು ಮಾಡಬಾರದು. ಸಂಸ್ಕೃತದಲ್ಲಿ 'ಹನ್' ಧಾತುವಿಗೆ ಕರ್ಮಣಿ ಪ್ರಯೋಗದಲ್ಲಿ 'ಯ' ಸೇರಿ 'ಹನ್ಯ' ರೂಪವಾದಾಗಲೂ (ಕೊಲ್ಲು+ಅಲ್ ಪಡು) ಕನ್ನಡದಂತೆ ಅಲ್ಲಿ ನೀವು ಹೇಳುವಂತೆ ಎರಡು ಧಾತುಗಳಿಲ್ಲವೆಂಬದು ನಿಜ; ಪಡು ಧಾತುವಿಗೆ ಅನುಭೋಗಿಸು ಎಂಬ ಅರ್ಥವನ್ನಿಟ್ಟುಕೊಳ್ಳದೆ ಫಲ ವನ್ನು ಹೊಂದು— ವಿಷಯವಾಗು — ಎಂಬ ಅರ್ಥವನ್ನಿಟ್ಟುಕೊಳ್ಳಬೇಕೆಂದು ಹೇಳುತ್ತೇನೆ. ಪಡೆ ಧಾತುವೂ ಆರಂಭಕ್ಕೆ ಇತ್ತೋ ಎಂದು ತೋರುತ್ತದೆ. 'ಪೇಳಲ್ಪಡೆಗುಂ' ದರ್ಪಣದ ಪ್ರಯೋಗವಿದೆ. ಆಗ ಫಲವನ್ನು ಹೊಂದು ಎಂದು ಅರ್ಥವನ್ನಿಟ್ಟುಕೊಳ್ಳುವದಕ್ಕೆ ಹೆಚ್ಚಿಗೆ ಅನುಕೂಲ. ನೀವು ಹೇಳುವಂತೆ ಕ್ರಿಯಾಫಲವನ್ನು ಅನುಭೋಗಿಸು ಎಂಬ ಅರ್ಥವೇ ತಪ್ಪದೆ ಎಲ್ಲರಿಗೂ ತೋರು ತ್ತಿದ್ದರೆ ಆ ಕಾಲದಲ್ಲಿ ಕೊಲ್ಲುತ್ತಾನೆ ಕೊಲ್ಲುತ್ತಾನೆ ಹೀಗೆ ಒಂದೇ ಧಾತುವಾಗು ವಂತೆ ಪ್ರಯತ್ನಿಸುತ್ತಿದ್ದರೋ ಏನೋ? ಅರ್ಥವು ಮುಖ್ಯವೇ ಹೊರತು ಶಬ್ದವು ಮುಖ್ಯವಲ್ಲ. ನನ್ನಿಂದ ಕಾವ್ಯವು ರಚಿಸಲ್ಪಟ್ಟಿತು ಎಂಬ ಕರ್ಮಣಿಪ್ರಯೋಗದ ವಾಕ್ಯವು 'ನಾನು ಕಾವ್ಯವನ್ನು ರಚಿಸಿದೆನು' ಎಂಬ ಕರ್ತರಿಪ್ರಯೋಗದ ವಾಕ್ಯದಲ್ಲಿ ತೋರುವ ಕರ್ತೃವಿನ ಅಭಿಮಾನವು ತೋರಬಾರದೆಂದು ಬಂದಿತು. (ಕರ್ತೃ ಮುಖ್ಯ ಶಾಬ್ದಬೋಧವನ್ನು ನೈಯಾಯಿಕರು (ಕರ್ತರಿ ಪ್ರಯೋಗದಲ್ಲಿ) ಹೇಳುತ್ತಾರೆ. ಕ್ರಿಯಾ ಮುಖ್ಯ ಶಾಬ್ದಬೋಧವನ್ನು ವೈಯಾಕರಣರು ಹೇಳು ತ್ತಾರೆ.) ಆಗಲೂ ಕರ್ಮಣಿಪ್ರಯೋಗದ ಇಂಥ ವಾಕ್ಯಗಳಲ್ಲಿ ಕರ್ಮ ಮುಖ್ಯ ಶಾಬ್ದಬೋಧದಿಂದ ಕರ್ತೃವಿನ ಅಭಿಮಾನದ್ಯೋತನಾಭಾವವು ಸಾಧಿಸುತ್ತದೆ.

ಇನ್ನು 'ಚಿತ್ರಮಯವಾಗಿ ಕಟ್ಟಿತು ಪರ್ಣಶಾಲೆ' ಎಂದು ಜೈಮಿನಿ ಭಾರತದಲ್ಲಿ ಪ್ರಯೋಗವಿದೆ. ಇದನ್ನು ಸಂಕ್ಷಿಪ್ತ ಕರ್ಮಣಿ ಪ್ರಯೋಗವೆಂದು ಎಲ್ಲರೂ ಹೇಳುವರು. ಇಲ್ಲಿ ಕಟ್ಟಿತು ಎಂಬದಕ್ಕೆ ಪರ್ಣಶಾಲೆ ಕರ್ತೃವಲ್ಲ; ಕಟ್ಟುವ ಕ್ರಿಯೆಯ ವಿಷಯ—ಕರ್ಮ— ಎಂದು ಹೇಳಬೇಕಾಗುವದು. ಅಡಗೆ ಮಾಡಿದೆ; ಈ ಪುಸ್ತಕ ಇದೇ ವರ್ಷ ಬರೆದು ಹೊರಬಿದ್ದಿದೆ ಮುಂತಾದ ಹೊಸಗನ್ನಡ ವಾಕ್ಯಗಳಲ್ಲಿಯೂ ಮಾಡಿದೆ, ಬರೆದು ಈ ಕ್ರಿಯಾವಾಚಕಗಳಿಗೆ ಅಡಿಗೆ, ಪುಸ್ತಕ ಇವು ಕರ್ತೃಗಳಲ್ಲ. ವಾಲ್ಮೀಕಿ ಶಿಷ್ಯರಿಂದ ನನ್ನಿಂದ ಮುಂತಾದವು ಕರ್ತೃಗಳು.

ಕರ್ಮಣಿ ಪ್ರಯೋಗವು ಸಂಸ್ಕೃತದಿಂದ ಬಂದದರಿಂದ ಸಂಸ್ಕೃತದಲ್ಲಿರುವ ಕ್ರಿಯಾಪದ-ಅರ್ಥವನ್ನೇ ಕನ್ನಡಕ್ಕೆ ಹೊಂದಿಸಿಕೊಳ್ಳುವದು ಉಚಿತವು. ರಾಮ ನಿಂದ ಹೇತು ಅಲ್ಲ, ಕರ್ತೃ; ರಾವಣನು ಕರ್ತೃವಲ್ಲ ಕರ್ಮ, ಕೊಲ್ಲಲ್ಪಡು ಧಾತುವಲ್ಲ, ಕೊಲ್ಲು ಧಾತು, 'ಅಲ್ಪಡು' ಇದು ಆಖ್ಯಾತಪ್ರತ್ಯಯಕ್ಕೆ ಕರ್ಮ ಎಂಬ ಅರ್ಥವನ್ನು ತರುವದಕ್ಕೆ ಸಹಾಯಕ ಎಂಬ ಮಾತುಗಳನ್ನು ಒಪ್ಪ ಬೇಕೆಂದು ತೋರುತ್ತದೆ.

ಈ ದಿವಸ ನಾನು ಮುಖ್ಯವಾಗಿ ಗಮಕಸಮಾಸ, ಕೃದಂತ ನಾಮಗಳು ವಾಕ್ಯದಲ್ಲಿ ಅನ್ವಯಿಸುವ ಬಗೆ, ಸಮಾಸದಲ್ಲಿ ಕೆಚ್ಚನೆ, ಬೆಚ್ಚನೆ, ಪಚ್ಚನೆ ಎಂಬ ಅವ್ಯಯಗಳಿಗಿಂತ ಕಿಸಿದು, ಬಿಸಿದು, ಪಸಿದು ಶಬ್ದಗಳು ಮೇಲು, ಅಂಶಿಸಮಾಸ, 'ಅವ್ಯಯೀಭಾವ' ಹೆಸರು ಅಂಶಿಸಮಾಸಕ್ಕೆ ಬೇಡ, ರಾಮನವೋಲ್ ಸೀತೆ ಯಂತೆ ಮೊದಲಾದವನ್ನು ಸಮಾಸಗಳೆಂದು ಹೇಳಬೇಕು, ಬೇಗ ಬಂದವನು ತಿಬ್ಬಸುಡಿದವನನ್ನು ಮುಂತಾದವು ಸಾಮಾನ್ಯ ಸಮಾಸಗಳು, ಬಹುವ್ರೀಹಿ ಸಮಾಸದ ಅನಾವಶ್ಯಕತೆ, ಆಖ್ಯಾತವಿಭಕ್ತಿ ಪ್ರಯೋಗ, ಪ್ರಯೋಗವೆಂದರೇನು, ಕರ್ತರಿ ಕರ್ಮಣಿ ಪ್ರಯೋಗ ಶಬ್ದಗಳ ನಿರ್ವಚನ, ಹೊಸಗನ್ನಡದಲ್ಲಿ ಈಚೆಗೆ ಸೇರುತ್ತಬಂದ ಕೆಲವು ವಾಕ್ಯರಚನಾಪ್ರಕಾರಗಳನ್ನು ಕರ್ತರಿಪ್ರಯೋಗದಲ್ಲಿ ಸೇರಿಸುವದು, ಕರ್ಮಣಿಪ್ರಯೋಗದ ವಿಷಯವಾಗಿ ಆಕ್ಷೇಪ, ಅದರ ಸಮಾ ಧಾನ ಈ ವಿಷಯಗಳನ್ನು ನನ್ನ ಅಲ್ಪಮತಿಗೆ ತೋರಿದಷ್ಟು ವಿವೇಚಿಸಿದೆನು.

ದರ್ಪಣಶಾಸನಗಳಲ್ಲಿ ವಿಚಾರಣೀಯ ವಿಷಯಗಳು ಇನ್ನೂ ಹಲವು ಇರು ವವು. ಶಾಸ್ತ್ರೀಯ ವಿಷಯಗಳೂ ಉಂಟು. ಹೊಸಗನ್ನಡ ಭಾಷೆಗೆ ಸಂಬಂಧ ಪಟ್ಟ ಕೆಲವು ವಿಷಯಗಳನ್ನು ಮಾತ್ರ ಈ ಉಪನ್ಯಾಸಗಳಲ್ಲಿ ಸ್ವಲ್ಪ ವಿವೇ ಚಿಸಿದೆನು.

ದರ್ಪಣಕಾರನೂ ಶಾಸನಕಾರನೂ ತಮ್ಮ ಕಾಲದಲ್ಲಿ ಬೆಳೆದುಬಂದ ಭಾಷೆಗೆ ವ್ಯಾಕರಣಗಳನ್ನು ಬರೆದರು. ಆದದರಿಂದ ನಾಗವರ್ಮನು ಬಿಟ್ಟ, ಇಲ್ಲವೆ ತಮ್ಮ ಕಾಲದ ಭಾಷೆಗೆ ಹೆಚ್ಚಿಗೆ ಹೇಳಬೇಕಾದ ವಿಷಯಗಳನ್ನು ಹೇಳಿದರು. ಇದರಿಂದ ಇವರ ವ್ಯಾಕರಣಗಳು ದೊಡ್ಡವು ಆದವು. ಸಂಧಿ ನಾಮಪದ ಕೃತ್ತದ್ಧಿತಗಳು ಸಮಾಸಪ್ರಕರಣ ಇವುಗಳನ್ನು ವ್ಯವಸ್ಥೆಗೊಳಿಸಿದರು. ಶಾಸನಕಾರನು ಸಮಾಸ ಪ್ರಕರಣದಲ್ಲಿ ಹಲವು ಹೊಸ ವಿಷಯುಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ತಂದನು. ಕುದುರೆಯುಂ ಆತನುಂ—ಅವರ್, ಕಲ್ಲನುಂ ನೀನುಂ— ನೀಂ, ನೀಮುಂ ಆನುಂ— ಆಂ, ಮುಂತಾದ ಏಕಶೇಷದ್ವಂದ್ವಗಳನ್ನು ಹೇಳಿದ್ದು ಒಳ್ಳೆಯದೇ ಆಯಿತು. ಇವರಿಬ್ಬರೂ ಪೂರ್ವದ ಹಳಗನ್ನಡದಲ್ಲಿ ಬರುವ ಎಲ್ಲಾ, ಕುವರಂಕರಾಮುನಾ, ಬಿಲ್ಲಾನದಂ, ( ಬಿಲ್ಲಾಂ ) ಬಂದಾನ್, ಬಂದೋನ್, ಮಾಡಿದೋನಂ, ಆವೊಂ, ಮಾಡಿದೊಂ, ಈವೇಂ ಮೊದಲಾದ ರೂಪಗಳನ್ನು ಅಲ್ಲಲ್ಲಿ ಹೇಳಿದ್ದಾರೆ. ಇವು ಪ್ರಾಚೀನ ( ಪೂರ್ವದ ಹಳಗನ್ನಡದ ) ಪ್ರಯೋಗಗಳೆಂದು ಸ್ಪಷ್ಟವಾಗಿ ಹೇಳಿಲ್ಲ. ದರ್ಪಣಕಾರನು ತನ್ನ ಕಾಲದಲ್ಲಿ ಕನ್ನಡವು ಹೊಸಗನ್ನಡವಾಗುತ್ತ ನಡೆದದ್ದನ್ನು ಎಂದರೆ ಅ ಟಗಳು ಮಾಯವಾಗುತ್ತ ನಡೆದದ್ದು, ಎತ್ತಣದು— ಎತ್ತಣ್ತು, ಅವುಂಡು— ಔಂಡು, ಕೋರಯಿಸು— ಕೋರೈಸು, ಪಾಂಗು— ಅಹಗು— ಹಾಗು. ಹೀಗೆ ರೂಪಾಂತರವಾದದ್ದು, ಅಂತಪ್ಪ— ಅಂತಹ ಹೀಗೆ ಪಕಾರವು ಹಕಾರವಾದದ್ದು ಇರ್— ಇರು ಹೀಗೆ ವ್ಯಂಜನಾಂತಗಳು ಸ್ವರಾಂತಗಳಾದದ್ದು ಮುಂತಾದವನ್ನು ಸೂಚಿಸಿದ್ದಾನೆ.

ಇನ್ನು ಹೊಸಗನ್ನಡದಲ್ಲಿ ಈಚೆಗೆ ಅಶಾಸ್ತ್ರೀಯ ಅವ್ಯಾಕೃತ ರೂಪಗಳು ಸೇರುತ್ತ ಬಂದಿವೆ. ಭಾಷೆಯ ಬೆಳವಣಿಗೆ ಬೇಕು, ಆದರೆ ವಿಶೃಂಖಲವಾಗಿ ಬೆಳೆಯುವದು ಅನುಚಿತ. ಆ ರೂಪಗಳನ್ನು ತಡೆಯುವದು ಭಾಷೆಯ ಬಿಗುವಿಗೆ ಆವಶ್ಯಕ. ಎಡಕಿನ ( ಎಡಕೆ ಈ ಚತುರ್ಥೀ ರೂಪದಮೇಲೆ ಇನ್ ಅ ಸೇರಿದವು ) ಬಲಕಿನ, ಮೂಡಣದ ( ಷಷ್ಠಿಯ ಮೇಲೆ ಷಷ್ಠಿ ) ಸುತ್ತಲಿನ ಮುತ್ತಗಿನ, ನೂರು ಬ್ರಾಹ್ಮಣರು (ನಪುಂಸಕ ಸಂಖ್ಯಾ ವಾಚಕವು ಪುಲ್ಲಿಂಗದ ವಿಶೇಷಣ.) ಅಯ್ನೂರು ಅಯ್ಯನವರು (—ಇಲ್ಲಿಯ ಪತ್ರಿಕೆಗಳ ಭಾಷೆ) ಪಾತ್ರನಾದವ ಭೂಷಣನಾದವ, ಒಗ್ಗಟ್ಟು ( ಇಲ್ಲಿ ಕ ಕಾರಕ್ಕೆ ಗ ಕಾರಾದೇಶವಿಲ್ಲವೆಂದು "ಒಂದೆರಡರ್ಕೆ ಆಕಾರಕ್ಕಂ ದಾದಾದೇಶ ರೇಫೆಗಂ........ ಕತಪಕ್ಕೆ ತೃತೀಯವೃತ್ತಿ ಎಂದುಂ ಇಲ್ಲ" ಎಂದು ದರ್ಪಣಕಾರನು ಒಪ್ಪೆಯಿಟ್ಟಿದ್ದರೂ ಉತ್ತರ ಕರ್ನಾಟಕದ ಒಬ್ಬನ ಬಾಯಿಂದಲೂ ಎಂದೂ ಬಾರದ ಈ ಶಬ್ದವು ಉತ್ತರ ಕರ್ನಾಟಕದಲ್ಲಿಯೂ

ಭರವಿಂದ ನುಗ್ಗುತ್ತಿದೆ. ನಿರ್ಲಜ್ಜತೆ! ) ಹೋೞಿ (ಹೋೞತು ಶುದ್ಧರೂಪ) ಹೇೞಿ (ಹೋೞು ಹೇೞು ಧಾತುಗಳ ಭೂತಕಾಲವಾಚಕಾವ್ಯಯಗಳು! ಇವು ಕನ್ನಡವನ್ನು 'ಕಲಿತು ಮಾತಾಡುವವರು'—ಜನ್ಮಭಾಷೆ ಕನ್ನಡವಲ್ಲದವರು— ತಂದಿರುವ ರೂಪಗಳು— ನೃಪತುಂಗನು ಹೇಳಿದ ತಿರುಳ್ಗನ್ನಡ ನಾಡಿನವರಿಗೆ ಇವು ಬಹಳ ವಿಚಿತ್ರವಾಗಿ ತೋರುತ್ತವೆ.) ನುಡಿದಿತು ನಡೆದಿತು (ವ್ಯಾಕರಣವು ನುಡಯಿತು ನಡೆಯಿತು ಎಂಬ ರೂಪಗಳನ್ನು ಹೇಳುತ್ತಿದ್ದರೂ— ಇವೂ ಕಲಿತು ಕನ್ನಡವನ್ನಾಡುವವರ ಹೇಸಿಗೆ! ) ಮುಂತಾದ ರೂಪಗಳು ನೂರಾರು ಸೇರಿವೆ. ಇಂಥವನ್ನೆಲ್ಲ ಕೇರಿ ಹಾರಿಸುವದು ಭಾಷೆಯ ಅಂದವನ್ನು—ವ್ಯವಸ್ಥೆಯನ್ನು— ಕಾದುಕೊಳ್ಳುವ ಹೊಣೆಗಾರರ ಕೆಲಸ.

ನಾನು ನಿನ್ನೆ ಮತ್ತು ಈ ದಿನ ಕೆಲವು ವಿಷಯಗಳನ್ನು ವಿವೇಚಿಸಿದ್ದು ಮಾನ್ಯರಾದ ದರ್ಪಣ. ಶಾಸನಕಾರರ ಲೋಪಗಳನ್ನು ಎತ್ತಿಣಿಸುವ ಬುದ್ಧಿಯಿಂದಲ್ಲವೆಂದೂ ವಿಚಾರಣೀಯ ವಿಷಯಗಳಾದದರಿಂದ ಬಲ್ಲವರು ಗಮನಿಸಬೇಕೆಂದೂ ಹೇಳಿದನೆಂದು ತಿಳಿಯಬೇಕೆಂದು ತಮ್ಮನ್ನು ಬಿನ್ನಯಿಸುತ್ತೇನೆ. ಈ ವಿಚಾರಗಳ ಯುಕ್ತಾಯುಕ್ತತೆಯನ್ನು ತಾವು ನಿರ್ಣಯಿಸಬಹುದು.

ಅಧ್ಯಕ್ಷ **ವಿದ್ವದ್ರತ್ನ ಶ್ರೀ ಆರ್. ಎಸ್. ಪಂಚಮುಖಿ,** ಎಂ. ಎ. ಮಹಾಶಯರು ನನಗೂ ಉಪನ್ಯಾಸದ ಒಂದು ಅವಕಾಶವನ್ನು ಕಲ್ಪಿಸಿ ಕೊಟ್ಟದ್ದಕ್ಕಾಗಿ ಅವರಿಗೆ ವಂದನೆಗಳು. ಕೇಳುಗರು ( ಶ್ರೋತಾರರು ) ವ್ಯಾಕರಣದ ' ರುಕ್ಷ ' ವಿಷಯಗಳ ವಿವೇಚನೆ ಮಾಡಿದ್ದನ್ನು ತಾಳ್ಮೆಯಿಂದ ಕೇಳಿಕೊಂಡದ್ದಕ್ಕಾಗಿ **ಅವರಿಗೆ** ವಂದನೆಗಳು.

---

# ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ

## ಕನ್ನಡ ಪ್ರಕಟನೆಗಳು

೧. ಮೂರು ಉಪನ್ಯಾಸಗಳು — ಶ್ರೀ. ಗೋವಿಂದ ಪೈ ರೂ. ೧—೦—೦

೨. ಐರಾವತ
(ಕುಮಾರವ್ಯಾಸ ವಿರಚಿತ — ಶ್ರೀ. ಆರ್. ಎಸ್. ಪಂಚಮುಖಿ ರೂ. ೧—೮—೦

೩. [illegible]ಬಂಧನಂ
([illegible] ವಿರಚಿತ) — ಶ್ರೀ. ಆರ್. ಎಸ್. ಪಂಚಮುಖಿ ರೂ. ೧—೪—೦

೪. ಕರ್ನಾಟಕ ಸಂಗೀತವೂ ದಾಸಕೂಟವೂ
ಅರ್ಥಾತ್
ಭಾರತೀಯ ಆರ್ಯಸಂಗೀತದ ಇತಿಹಾಸವು
ಕಿನ್ನರಿವಿದ್ವಾನ್ ಹುಲಗೂರು ಕೃಷ್ಣಾಚಾರ್ಯರು ರೂ. ೨—೮—೦

೫. ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು
ಅನುಭವಾಮೃತವೂ ಹರಿಕಥಾಮೃತಸಾರವೂ
ಶ್ರೀ. ಡಿ. ಕೆ. ಭೀಮಸೇನರಾಯರು ರೂ. ೩—೦—೦

೬. ಕೆಲವು ಕನ್ನಡ ವ್ಯಾಕರಣ ವಿಚಾರಗಳು
ಪಂಡಿತ ಮ. ಗ. [illegible] ರೂ. ೦—೮—೦

ಗ್ರಂಥಗಳು ದೊರೆಯುವ ಸ್ಥಳ:
ಡಾಯರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ
ಧಾರವಾಡ.